# ಅಥಣಿ : ಸಾಂಸ್ಕೃತಿಕ ಚರಿತ್ರೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಚರಿತ್ರೆ ವಿಷಯದಲ್ಲಿ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)


ಸಂಶೋಧನಾ ವಿದ್ಯಾರ್ಥಿ

**ರಾಜೇಂದ್ರ ಮ. ದೇವರಡ್ಡಿ**

ಎಂ. ಎ.

ಮಾರ್ಗದರ್ಶಕರು.

**ಡಾ. ಶ್ರೀಮತಿ ಸ್ಮಿತಾ ಪಿ. ಸುರೇಬಾನಕರ**

ಎಂ. ಎ., ಪಿ. ಹೆಚ್.ಡಿ.

ಮುಖ್ಯಸ್ಥರು.

ಇತಿಹಾಸ ವಿಭಾಗ

ರಾಣಿ ಪಾರ್ವತಿದೇವಿ ಮಹಾವಿದ್ಯಾಲಯ, ಬೆಳಗಾವಿ.

**ಚರಿತ್ರೆ ವಿಭಾಗ**

**ಶ್ರೀ ಬಿ. ಆರ್. ದರೂಗ ಸಂಶೋಧನ ಕೇಂದ್ರ**

**ಹಾರೂಗೇರಿ, ತಾ॥ ರಾಯಬಾಗ.**




## ಚರಿತ್ರೆ ಅಧ್ಯಯನ ವಿಭಾಗ


ಸಂಯೋಜನೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೦೯

# ಅಥಣಿ : ಸಾಂಸ್ಕೃತಿಕ ಚರಿತ್ರೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಚರಿತ್ರೆ ವಿಷಯದಲ್ಲಿ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)



ಸಂಶೋಧನಾ ವಿದ್ಯಾರ್ಥಿ

**ರಾಜೇಂದ್ರ ಮ. ದೇವರಡ್ಡಿ**

ಎಂ. ಎ.

ಮಾರ್ಗದರ್ಶಕರು.

**ಡಾ. ಶ್ರೀಮತಿ ಸ್ಮೀತಾ ಪಿ. ಸುರೇಬಾನಕರ**

ಎಂ. ಎ., ಪಿ. ಹೆಚ್.ಡಿ.

ಮುಖ್ಯಸ್ಥರು.

ಇತಿಹಾಸ ವಿಭಾಗ

ರಾಣಿ ಪಾರ್ವತಿದೇವಿ ಮಹಾವಿದ್ಯಾಲಯ, ಬೆಳಗಾವಿ.



## ಚರಿತ್ರೆ ವಿಭಾಗ

ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ,

ಹಾರೂಗೇರಿ, ತಾ|| ರಾಯಬಾಗ .



## ಚರಿತ್ರೆ ಅಧ್ಯಯನ ವಿಭಾಗ

ಸಂಯೋಜನೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩೨೭೬

೨೦೦೯

# ಪ್ರಮಾಣ ಪತ್ರ

'ಅಥಣಿ : ಸಾಂಸ್ಕೃತಿಕ ಚರಿತ್ರೆ' ಎಂಬ ಶೀರ್ಷಿಕೆಯ ನಿಬಂಧವನ್ನು ಡಾ॥ ಶ್ರೀಮತಿ ಸ್ಮಿತಾ ಪಿ. ಸುರೇಬಾನಕರ ಅವರ ಮಾರ್ಗದರ್ಶನದಲ್ಲಿ ನಾನು ಸಿದ್ಧಪಡಿಸಿದ್ದೇನೆ. ಹಾರೂಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ಅಧ್ಯಯನ ವಿಭಾಗಕ್ಕೆ ಎಂ. ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವದಿಲ್ಲ ಮತ್ತು ಈ ಮೊದಲು ಇದನ್ನು ಇಡಿಯಾಗಿ ಇಲ್ಲವೆ ಬಿಡಿಯಾಗಿ ಪ್ರಕಟಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಹಾರೂಗೇರಿ
ದಿನಾಂಕ : ೨೯-೦೯-೨೦೦೯

ರಾಜೇಂದ್ರ, ಮ. ದೇವರಡ್ಡಿ
ಸಂಶೋಧನಾ ವಿದ್ಯಾರ್ಥಿ
ಶ್ರೀ ಬಿ. ಆರ್. ದರೂರ ಸಂಶೋಧನಾ
ಕೇಂದ್ರ, ಹಾರೂಗೇರಿ.

# ದೃಢೀಕರಣ ಪತ್ರ

ರಾಜೇಂದ್ರ ಮ. ದೇವರಡ್ಡಿ ಇವರು 'ಅಥಣಿ : ಸಾಂಸ್ಕೃತಿಕ ಚರಿತ್ರೆ' ಎಂಬ ಶೀರ್ಷಿಕೆಯ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಾರೂಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ಅಧ್ಯಯನ ವಿಭಾಗಕ್ಕೆ ಎಂ. ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಇವರು ಈ ಮೊದಲು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವದಿಲ್ಲ. ಮತ್ತು ಇದು ಈ ಮೊದಲು ಎಲ್ಲಿಯೂ ಇಡಿಯಾಗಿ ಇಲ್ಲವೆ ಬಿಡಿಯಾಗಿ ಪ್ರಕಟವಾಗಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ಹಾರೂಗೇರಿ
ದಿನಾಂಕ : ೨೯-೦೯-೨೦೦೯

ಡಾ|| ಶ್ರೀಮತಿ ಸ್ಮಿತಾ ಪಿ. ಸುರೇಬಾನಕರ
ಮಾರ್ಗದರ್ಶನಕರು
ಶ್ರೀ ಬಿ. ಆರ್. ದರೂರ ಸಂಶೋಧನಾ
ಕೇಂದ್ರ, ಹಾರೂಗೇರಿ.

# ಪರಿವಿಡಿ


| ಅ.ನಂ. | ವಿಷಯಾನುಕ್ರಮಣಿಕೆ | ಪುಟ ಸಂಖ್ಯೆ |
|---|---|---|
| ೦೧ | ಅಧ್ಯಯನದ ಉದ್ದೇಶ, ಅವಶ್ಯಕತೆ,<br>ಅಧ್ಯಯನದ ವ್ಯಾಪ್ತಿ,<br>ಅಧ್ಯಯನದ ವಿಧಾನ ,<br>ಅಧ್ಯಯನದ ಸ್ವರೂಪ, ಹಾಗೂ<br>ಪೂರ್ವ ಪ್ರಯತ್ನಗಳ ಸಮಿಕ್ಷೆ | ೧-೧೦ |
| ೦೨ | ಅಥಣಿ : ಭೌಗೋಳಿಕ ಪರಿಸರ ಮತ್ತು ಚಾರಿತ್ರಿಕ ನೆಲೆಗಳು<br>೧) ಸಪ್ತಸಾಗರ<br>೨) ಸತ್ತಿ<br>೩) ಮಂಗಸೂಳಿ<br>೪) ಅಥಣಿ<br>೫) ನಂದಗಾಂವ<br>೬) ಬಳ್ಳಿಗೇರಿ<br>೭) ಕಾಗವಾಡ<br>೮) ಐನಾಪೂರ<br>೯) ಮದಭಾವಿ | ೧೧-೨೪ |
| ೦೩ | ಅಥಣಿ : ಸಾಂಸ್ಕೃತಿಕ ಪರಂಪರೆ<br>೧) ರಾಜಕೀಯ ವ್ಯವಸ್ಥೆ<br>೨) ಸಾಮಾಜಿಕ ವ್ಯವಸ್ಥೆ<br>೩) ಆರ್ಥಿಕ ವ್ಯವಸ್ಥೆ<br>೪) ಧಾರ್ಮಿಕ ವ್ಯವಸ್ಥೆ | ೨೫-೪೪ |
| ೦೪ | ಅಥಣಿ : ಪರಿಸರದ ಶೈಕ್ಷಣಿಕ ಹಾಗೂ ಸಾಹಿತ್ಯ ಪರಂಪರೆ<br>೧) ಶೈಕ್ಷಣಿಕ ವ್ಯವಸ್ಥೆ<br>೨) ಅಥಣಿ ಪರಿಸರದ ಸಾಹಿತ್ಯ ಪರಂಪರೆ | ೪೫-೬೧ |
| ೦೫ | ಅಥಣಿ: ಪರಿಸರದ ಪ್ರಮುಖ ದೇವಾಲಯಗಳು ಮತ್ತು ಮಠಗಳು | ೬೨-೯೧ |
| ೦೬ | ಸಮಾರೋಪ<br>➠ ಪರಾಮರ್ಶನ ಗ್ರಂಥಗಳು<br>➠ ಪಾರಿಭಾಷಿಕ ಪದಗಳು<br>➠ ಛಾಯಾ ಚಿತ್ರಗಳು<br>➠ ನಕ್ಷೆಗಳು<br>✪ ಅನುಬಂಧಗಳು : | ೯೨-೯೩ |


* * * * *

## ಅಧ್ಯಾಯ –೧

# ಅಧ್ಯಯನದ ಉದ್ದೇಶ, ಅವಶ್ಯಕತೆ, ವ್ಯಾಪ್ತಿ, ವಿಧಾನ, ಆಕರ ಸಾಮಗ್ರಿಗಳು ಮತ್ತು ಅಧ್ಯಯನದ ಸ್ವರೂಪ ಹಾಗೂ ಪೂರ್ವ ಪ್ರಯತ್ನಗಳ ಸಮೀಕ್ಷೆ

### ಅಧ್ಯಯನದ ಉದ್ದೇಶ

ಚರಿತ್ರೆ ಸಂಶೋಧನೆ ಎಂದರೆ ಸರಳ ಅರ್ಥದಲ್ಲಿ ಸತ್ಯದ ಅಂತಿಮ ಹಂತಕ್ಕೆ ತಲುಪಲು ಮಾಡುವ ದೀರ್ಘ ಪಯಣ. ಇದರ ಮೂಲ ಉದ್ದೇಶ ನೈಜತೆಯನ್ನು ಕಂಡು ಹಿಡಿಯುವುದೇ ಆಗಿದೆ. ಈ ಚರಿತ್ರೆ ಸಂಶೋಧನಾ ಕ್ರಮ ನಮ್ಮ ಕರ್ನಾಟಕದಲ್ಲಿ ಭೂ–ಉತ್ಖನನ, ಶಾಸನ, ಸ್ಮಾರಕ, ನಾಣ್ಯಗಳ ಸಂಗ್ರಹ, ಹಸ್ತಪ್ರತಿ ಶೋಧ, ಭಾಷೆ ಜನಪದಗಳ ವಿಶ್ಲೇಷಣೆ ಮತ್ತು ಪ್ರಕಟಣೆಗಳ ಮೂಲಕ ನಿರಂತರವಾಗಿ ಸಾಗಿದೆ. ಈ ಮೂಲಕ ನಾಡಿನ ಚರಿತ್ರೆ, ಸಾಹಿತ್ಯ, ಸಂಸ್ಕೃತಿಗಳ ಸಮಗ್ರ ಪರಿಚಯ ಮಾಡುವ ಪ್ರಯತ್ನ ನಡೆದಿದೆ.

ಚರಿತ್ರೆ ಸಂಶೋಧನೆ ಇಂದು ವಿವಿಧ ಹಾಗೂ ಹೊಸ ಹೊಸ ಆಯಾಮಗಳನ್ನು ಮೈಗೂಡಿಸಿಕೊಂಡು ಮುಂದುವರೆಯುತ್ತಲಿದೆ. ಇವುಗಳ ಒಟ್ಟಾರೆ ಉದ್ದೇಶ ದೇಶದ ಚರಿತ್ರೆಯನ್ನು ಸಮಗ್ರ ಹಾಗೂ ನೈಜತೆಯಿಂದ ಪುನರಚಿಸುವುದಾಗಿದೆ. ಯಾವುದೇ ಪ್ರದೇಶದ ಚರಿತ್ರೆಯ ಪುನರಚನೆಯು ಸ್ಪಷ್ಟ ಹಾಗೂ  ನಿಖರವಾಗಿರಬೇಕಾದರೆ ಅದು ತಲಸ್ಪರ್ಶಿಯಾಗಿರಬೇಕು. ಅಂದರೆ ಇದೊಂದು ರೀತಿಯಲ್ಲಿ ಸಾಂಸ್ಕೃತಿಕ ಚರಿತ್ರೆಯನ್ನು ತಿಳಿದುಕೊಳ್ಳುವ ಪ್ರಯತ್ನವೆಂದು ಹೇಳಬಹುದು. ಈ ಕಾರ್ಯವು ಗತಕಾಲಕ್ಕೆ ಸಂಬಂಧಿಸಿದ ವಿಷಯವಾಗಿರುವುದರಿಂದ ಹಲವಾರು ಕ್ಲಿಷ್ಟ ಸಮಸ್ಯೆಗಳನ್ನು ಸಂಶೋಧಕ ಎದುರಿಸಬೇಕಾಗಿದೆ. ಏಕೆಂದರೆ ಆಧಾರಗಳ ಕೊರತೆ, ದೊರೆತ ಆಕರಗಳ ಸರಿಯಾದ ಸಂಗ್ರಹಣೆ ಮತ್ತು ಪ್ರಕಟಣೆಯಾಗದೇ ಇರುವ ಅದೆಷ್ಟೋ ಮಾಹಿತಿಗಳ ಕೊರತೆಯಿಂದಾಗಿ ಸಂಶೋಧಕನು ಅತೀ ಎಚ್ಚರಿಕೆಯಿಂದ ತನ್ನ ಕಾರ್ಯವನ್ನು ಮುಂದುವರಿಸಬೇಕಾಗಿದೆ.

ಉತ್ತರ ಕರ್ನಾಟಕದ ಬೆಳಗಾವಿ ಜಿಲ್ಲೆಯ ಉತ್ತರ ಗಡಿಯಲ್ಲಿರುವ ಅಥಣಿ ಪರಿಸರದ ಸಾಂಸ್ಕೃತಿಕ ಚರಿತ್ರೆಯನ್ನು ನಿರೂಪಿಸುವುದು ಇಂತಹದೊಂದು ಪ್ರಯತ್ನವಾಗಿದೆ.  ನಮ್ಮ ನಾಡಿನ ಚರಿತ್ರೆ ರಚನೆಗೆ ನಡೆದ ಪ್ರಯತ್ನಗಳನ್ನು ಗಮನಿಸಿದರೆ ನಿರಾಶೆ ಎನಿಸುತ್ತದೆ. ಕೇವಲ ಅರಸು ಕೇಂದ್ರಿತ ಮತ್ತು ಪ್ರಮುಖ ಐತಿಹಾಸಿಕ ಸ್ಥಳಗಳನ್ನು ಕೇಂದ್ರವಾಗಿಟ್ಟುಕೊಂಡು ಚರಿತ್ರೆ ರಚನೆಗೆ ಹೆಚ್ಚಿನ ಆದ್ಯತೆ

ನೀಡಲಾಗಿದೆ. ಇದರಿಂದಾಗಿ ಸಮಾಜದ ಅದೆಷ್ಟೋ ಕ್ಷೇತ್ರಗಳು ಚರಿತ್ರೆಯ ಭಾಗವಾಗಿರದೆ ನಿರ್ಲಕ್ಷಿತವಾಗಿವೆ ಎಂದು ಹೇಳಬಹುದು. ಚರಿತ್ರೆ ಎಂದರೆ ಅದು ಕೇವಲ ಅರಸು ಕೇಂದ್ರಿತವಲ್ಲ, ಅಧಿಕಾರ ಕೇಂದ್ರಿತವಲ್ಲ ಅದು ನಾಡಿನ ಎಲ್ಲ ಸಮೂದಾಯಗಳ ಸಮಗ್ರ ಸಂಸ್ಕೃತಿಯನ್ನು ಪ್ರತಿಬಿಂಬಿಸುವಂತಿರಬೇಕು.

ಪ್ರಸ್ತುತ ಅಧ್ಯಯನದಲ್ಲಿ ಅಥಣಿ ಪರಿಸರವು ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರವಾಗಿದ್ದು ಇದರ ಸುತ್ತಮುತ್ತಲಿರುವ ಅನೇಕ ಗ್ರಾಮಗಳು ಚಾರಿತ್ರಿಕವಾಗಿ ಮಹತ್ವದ ನೆಲೆಗಳಾಗಿವೆ. ಇದುವರೆಗೆ ಈ ನೆಲೆಗಳಲ್ಲಿ ನಡೆದ ಸಂಶೋಧನೆಗಳು ಇದನ್ನು ಖಚಿತ ಪಡಿಸಿವೆ. ಸಂಶೋಧನೆಗೆ ಒಳಪಟ್ಟ ಪ್ರಮುಖ ಸ್ಥಳಗಳೆಂದರೆ,

⇨ ಸಪ್ತಸಾಗರ (೧೯೪೪), ಐನಾಪೂರ (೧೯೭೧), ಸತ್ತಿ (೧೯೭೧), ಐಗಳಿ, ಮಂಗಸೂಳಿ, ಕೊಡಗಾನೂರ, ಬನ್ನೂರ ಕೊಟ್ಟಲಗಿ (೧೯೯೬), ಕೊಕಟನೂರ

***ಸಪ್ತಸಾಗರ :*** ಇದು ಅಥಣಿ ತಾಲೂಕಿನ ಒಂದು ಗ್ರಾಮವಾಗಿದೆ. ಕೃಷ್ಣಾನದಿಯ ಉತ್ತರ ದಂಡೆಯ ಮೇಲಿದೆ ಈ ನೆಲೆಯನ್ನು ೧೯೪೪ ರಲ್ಲಿ ಡಾ॥ ಆರ್.ಎಸ್. ಪಂಚಮುಖಿಯವರು ಅನ್ವೇಷಣೆ ಕೈಗೊಂಡು ಪ್ರಾಚೀನ ಜನವಸತಿ ಕೇಂದ್ರವೆಂದು ಗುರುತಿಸಿದ್ದಾರೆ.[೧] ೧೯೭೧ ರಲ್ಲಿ ಡಾ॥ ಅ. ಸುಂದರಾ ಅವರು ಸತ್ತಿ ಹಾಗೂ ಐನಾಪೂರ ಎಂಬ ಗ್ರಾಮಗಳಲ್ಲಿ ನೂತನ ಶಿಲಾಯುಗದ ಹಾಗೂ ತಾಮ್ರ ಶಿಲಾಯುಗದ ಸಂಸ್ಕೃತಿಯ ಪ್ರಾಗೈತಿಹಾಸಿಕ ಕಾಲದ ಮಾನವ ವಾಸ್ತವ್ಯದ ನೆಲೆಗಳನ್ನು ಬೆಳಕಿಗೆ ತಂದಿದ್ದಾರೆ. ಡಾ॥ ಎಚ್.ಎಸ್. ಕಾಂಬಳೆ ಅವರು ೧೯೯೬ ರಲ್ಲಿ ಕೃಷ್ಣಾನದಿಯ ಬಲಭಾಗದಲ್ಲಿ ಅನ್ವೇಷಣೆ ಕೈಗೊಂಡಾಗ ಐನಾಪೂರ, ಐಗಳಿ, ಮಂಗಸೂಳಿ, ಕೊಡಗಾನೂರ, ಬನ್ನೂರು ಹಾಗೂ ಕೊಟ್ಟಲಗಿ ಎಂಬ ಪ್ರಾಚೀನ ಮಾನವನ ನೆಲಗಳು ಬೆಳಕಿಗೆ ಬಂದಿವೆ.[೨] ಶ್ರೀ ಆರ್.ಎನ್. ಗುರವ ಅವರು ಕೊಕಟನೂರಿನ ಕಲ್ಮೇಶ್ವರ ದೇವಾಲಯದ ಅಧ್ಯಯನ ಕೈಗೊಂಡು ಚಾಲುಕ್ಯರ ಕಾಲದ ವಾಸ್ತುಶಿಲ್ಪವನ್ನು ಪತ್ತೆ ಹಚ್ಚಿದ್ದಾರೆ. ಈ ಮೇಲಿನ ಎಲ್ಲ ಪ್ರಾಚೀನ ಜನವಸತಿ ಪ್ರದೇಶಗಳನ್ನು ಆಧಾರವಾಗಿಟ್ಟುಕೊಂಡು ಅಥಣಿ ಪ್ರಾಚೀನ ಸಾಂಸ್ಕೃತಿಕ ಪರಂಪರೆಯು ಶ್ರೀಮಂತವಾಗಿತ್ತೆಂದು ತಿಳಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

ಅಥಣಿಯನ್ನು ಕೇಂದ್ರವಾಗಿಟ್ಟುಕೊಂಡು ತಮ್ಮ ಅಧೀನ ಅಧಿಕಾರಿಗಳ ಮುಖಾಂತರ ಹಲವಾರು ಅರಸು ಮನೆತನಗಳು ಈ ಪ್ರದೇಶವನ್ನು ಆಳ್ವಿಕೆ ಮಾಡಿವೆ. ಉದಾಹರಣೆಗೆ ಕಲ್ಯಾಣದ ಚಾಲುಕ್ಯರು, ಕಲಚುರಿಗಳು, ಯಾದವರು, ಸೇವುಣರು, ಶೀಲಾಹಾರರು, ವಿಜಯ ನಗರದ ಅರಸರು ಪೋರ್ಚುಗೀಸರು. ವಿಜಾಪೂರದ ಆದಿಲ್ಲಷಾಹಿಗಳು, ಮರಾಠರು, ದೇಶಗತ್ತಿಗಳು ಹಾಗೂ ಬ್ರೀಟಿಷರು. ಇವರೆಲ್ಲರ ಆಳ್ವಿಕೆಯಲ್ಲಿ ಇಲ್ಲಿನ ಆಡಳಿತವು ಏಕ ಪ್ರಕಾರವಾಗಿರಲಿಲ್ಲ. ಇದಲ್ಲದೆ ಇಲ್ಲಿ ನೆಲೆಸಿದ್ದ ವಿವಿಧ ಜನರ ಧಾರ್ಮಿಕ ಹಾಗೂ ಸಾಮಾಜಿಕ ಜೀವನ ಕ್ರಮಗಳನ್ನು ಒಂದೇ ದೃಷ್ಟಿಗೆ ಒಳಪಡಿಸಿ ಅಧ್ಯಯನ ಕೈಗೊಳ್ಳುವುದು ಸುಲಭದ ಕಾರ್ಯವಾಗಿಲ್ಲ. ಆದ್ದರಿಂದ ಈ ನಾಡಿನ ವೈವಿಧ್ಯಮಯ

ಸಂಸ್ಕೃತಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಅಥಣಿ ಸಾಂಸ್ಕೃತಿಕ ಚರಿತ್ರೆಯನ್ನು ರಚಿಸಲು ಪ್ರಯತ್ನಿಸಲಾಗಿದೆ.

**ಅಧ್ಯಯನದ ಅವಶ್ಯಕತೆ**

ಸಮಗ್ರ ಕರ್ನಾಟಕದ ಚರಿತ್ರೆಯ ಪುಟಗಳನ್ನು ತಿರುವಿದಾಗ ಈ ನಾಡಿನ ಇತಿಹಾಸ ರಚನೆ ಪೂರ್ಣಗೊಂಡಿದೆ ಎಂದು ಹೇಳಲಾಗದು. ಇದಕ್ಕೆ ಕಾರಣಗಳು ಹಲವಾರು. ಸ್ವಾತಂತ್ರ್ಯ ಪೂರ್ವದಲ್ಲಿ ಕರ್ನಾಟಕ ಎಷ್ಟೋ ಪ್ರದೇಶಗಳು ಬೇರೆ ಬೇರೆ ಭಾಗಗಳಲ್ಲಿ ಹರಿದು ಹಂಚಿಹೋಗಿದ್ದವು. ಸ್ವಾತಂತ್ರ್ಯ ನಂತರವೂ ಸಹ ಭಾಷಾವಾರು ಪ್ರಾಂತ್ಯಗಳು ರಚನೆಯಾಗಿ ಮೈಸೂರು ರಾಜ್ಯ ೧೯೫೬ ರಲ್ಲಿ ಅಸ್ತಿತ್ವಕ್ಕೆ ಬಂದಿತು. ಈ ಸಂದರ್ಭದಲ್ಲಿ ಮೈಸೂರನ್ನು ಕೇಂದ್ರವಾಗಿಟ್ಟುಕೊಂಡು ದಕ್ಷಿಣ ಕರ್ನಾಟದ ಚರಿತ್ರೆ ರಚನೆಗೆ ಹೆಚ್ಚಿನ ಆಧ್ಯತೆ ನೀಡಲಾಗಿದೆ. ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕ ಎಂಬ ವಿಭಾಗಿಯ ಪದಗಳು ಕರ್ನಾಟಕದ ಏಕೀಕರಣ ನಂತರ ಹುಟ್ಟಿಕೊಂಡ ಶಬ್ದಗಳಾಗಿವೆ.

ಚರಿತ್ರೆ ರಚನೆಯಿಂದ ಪ್ರಾರಂಭವಾಗಿ ಅಭಿವೃದ್ಧಿಯ ವಿಷಯದ ವರೆಗೆ ಪ್ರತಿಯೊಂದು ರಂಗ ಇಲ್ಲಿ ನಿರ್ಲಕ್ಷಕ್ಕೊಳಗಾದದ್ದು ಸ್ಪಷ್ಟವಾಗಿ ಕಂಡುಬರುತ್ತದೆ. ಉತ್ತರ ಕರ್ನಾಟಕದ ಪ್ರಮುಖ ಪ್ರದೇಶಗಳಾದ ಕಿತ್ತೂರು, ವಿಜಾಪೂರ ಮತ್ತು ಬಾದಾಮಿಯಂತಹ ಅಧಿಕಾರ ಕೇಂದ್ರಿತ ಸ್ಥಳಗಳು ಮಾತ್ರ ಸಂಶೋಧನೆಗೆ ಒಳಪಟ್ಟು ಚಾರಿತ್ರಿಕ ಸ್ಥಳಗಳೆಂದು ಗುರುತಿಸಲ್ಪಟ್ಟಿವೆ. ಪ್ರಮುಖವಾಗಿ ಬೆಳಗಾವಿ ಜಿಲ್ಲೆಯ ಅಥಣಿ ಪ್ರದೇಶವು ಸ್ವಾತಂತ್ರ್ಯ ಪೂರ್ವದಲ್ಲಿ ಮುಂಬಯಿ ಪ್ರಸಿಡೆನ್ಸಿಯ ಭಾಗವಾಗಿತ್ತು. ಈ ಅವಧಿಯಲ್ಲಿ ಹಲವು ಸಂಸ್ಥಾನಿಕರು ಈ ಪ್ರದೇಶದಲ್ಲಿ ಕಾರ್ಯಭಾರ ಮಾಡಿದ್ದಾರೆ. ಅಲ್ಲದೆ ಈ ಕಾರ್ಯಭಾರ ಮೇಲಿಂದ ಮೇಲೆ ಕೈ ಬದಲಾವಣೆಗೊಂಡಿದೆ. ಅಂದರೆ ಈ ಪ್ರದೇಶವನ್ನು ನಿಶ್ಚಿತವಾದ ರಾಜಮನೆತನಗಳು ಆಳ್ವಿಕೆ ಮಾಡಿದ್ದರೂ ಸಹ ರಾಜಕೀಯ ಚರಿತ್ರೆ ರಚಿಸುವಷ್ಟು ಆಧಾರಗಳು ನಮಗೆ ಲಭ್ಯವಾಗಿಲ್ಲ. ಇತ್ತೀಚಿನ ಸಂಶೋಧನೆಗಳ ಫಲವಾಗಿ ಕಲ್ಯಾಣಿ ಚಾಲುಕ್ಯ, ಶಿಲಾಹಾರ, ಕಲಚೂರಿ, ಮರಾಠರು ಮತ್ತು ಆದಿಲ್ ಷಾಹಿಗಳ ಕಾಲದ ಅನೇಕ ಸ್ಮಾರಕಗಳು ಇಲ್ಲಿ ಲಭ್ಯವಾಗಿವೆ. ಇವೆಲ್ಲವುಗಳ ಸಹಾಯದಿಂದ ಈ ನಾಡಿನ ಸಮಗ್ರ ಸಾಂಸ್ಕೃತಿಕ ಚರಿತ್ರೆ ರಚನೆಯಾಗಬೇಕಿದೆ. ಇಂತಹ ಕಾರ್ಯವನ್ನು ನಿರ್ವಹಿಸುವ ಕಿರು ಪ್ರಯತ್ನ ಇದಾಗಿದೆ.

**ಅಧ್ಯಯನದ ವ್ಯಾಪ್ತಿ**

ಅಧ್ಯಯನದ ವ್ಯಾಪ್ತಿ ಎಂದರೆ ಸಂಶೋಧಕ ಅಧ್ಯಯನ ಕೈಗೊಂಡ ಕ್ಷೇತ್ರದ ವೈಶಾಲ್ಯತೆ ಎಂದರ್ಥ. ಚರಿತ್ರೆ ಅಧ್ಯಯನದಲ್ಲಿ ನಿಶ್ಚಿತವಾದ ವಿಷಯವನ್ನು ಆಯ್ದುಕೊಂಡರೆ ಅದರ ವ್ಯಾಪ್ತಿಯನ್ನು ಸರಳವಾಗಿ ಗುರುತಿಸಬಹುದು. ಆದರೆ ಒಂದು ಪ್ರದೇಶದ ಸಾಂಸ್ಕೃತಿಕ ಚರಿತ್ರೆಯಂತಹ ವಿಷಯಗಳನ್ನು ಅಧ್ಯಯನಕ್ಕೆ ಆಯ್ದುಕೊಂಡಾಗ ಅದರ ವ್ಯಾಪ್ತಿಯನ್ನು ಸುಲಭವಾಗಿ ಗುರುತಿಸಲು ಸಾಧ್ಯವಿಲ್ಲ. ಕರ್ನಾಟಕದಲ್ಲಿ ಇತ್ತೀಚಿನ ವರೆಗೆ ಚರಿತ್ರೆ ಅಧ್ಯಯನ ಮತ್ತು ರಚನೆ ಬೆಳೆದು ಬಂದುದು ರಾಜಕೀಯ ವಸ್ತುನಿಷ್ಠತೆಯ ವಿಷಯದಲ್ಲಿ ಮಾತ್ರ. ಆದರೆ ಅಥಣಿ ವಲಯದಲ್ಲಿ ಯಾವುದೇ ಒಂದು ಪ್ರಮುಖ ರಾಜ ಮನೆತನ ದೀರ್ಘಕಾಲದವರೆಗೆ ಆಳಿದ ಕುರುಹುಗಳು ಕಂಡುಬರುವುದಿಲ್ಲ. ಆದ್ದರಿಂದ

ಬೇರೆಲ್ಲ ಪ್ರದೇಶಗಳ ಅಧ್ಯಯನದಂತೆ ನಿಶ್ಚಿತ ರಂಗದಲ್ಲಿ ಅಧ್ಯಯನಕ್ಕೆ ಈ ಪ್ರದೇಶದಲ್ಲಿ ಸಮಸ್ಯೆಗಳು ಎದುರಾಗುತ್ತವೆ. ಇಂದು ಹೊಸ ತಾಂತ್ರಿಕ ಅನ್ವೇಷಣೆ ಹಾಗೂ ಭೂ ಉತ್ಖನನಗಳಿಂದ ಪ್ರಾಚ್ಯಮೂಲಗಳು ಇಲ್ಲಿ ಬೆಳಕಿಗೆ ಬಂದಿವೆ. ಇನ್ನೂ ಅವುಗಳ ಅಧ್ಯಯನ ನಡೆಯಬೇಕಾಗಿದೆ. ಇಂದು ಒಂದು ಪ್ರದೇಶದ ರಾಜಕೀಯ, ಸಾಮಾಜಿಕ, ಧಾರ್ಮಿಕ, ಸಾಹಿತ್ಯಿಕ ಮತ್ತು ಕಲೆ ವಾಸ್ತುಶಿಲ್ಪ ಹಾಗೂ ಚಿತ್ರಕಲೆ ಮುಂತಾದವುಗಳ ಸಾರವೇ ಮಾನವನ ಜೀವನ ಚರಿತ್ರೆ ಎಂದು ಬಹುಮಟ್ಟಿಗೆ ಒಪ್ಪಿಕೊಳ್ಳಲಾಗಿದೆ.

ಅಥಣಿ ಹಾಗೂ ಅದರ ಸುತ್ತಮೂತ್ತಲು ದೊರೆತಿರುವ ಶಾಸನ ಮತ್ತು ಸ್ಮಾರಕಗಳ ಆಧಾರದ ಮೇಲೆ ಈ ಪ್ರದೇಶದ ಅಧ್ಯಯನ ವಿಷಯದ ವ್ಯಾಪ್ತಿಯನ್ನು ಅಳೆಯಬಹುದಾಗಿದೆ. ಸಾಂಸ್ಕೃತಿಕ ವೈವಿಧ್ಯತೆಯನ್ನು ಸಾರವಾಗಿಟ್ಟುಕೊಂಡು ಪ್ರಾಚೀನ ಹಾಗೂ ಮಧ್ಯಕಾಲಿನ ಚರಿತ್ರೆಯಲ್ಲಿ ಈ ಪ್ರದೇಶದ ಚಾರಿತ್ರಿಕ ಮಹತ್ವನ್ನು ವಿವರಿಸುವುದು ಈ ಅಧ್ಯಯನದ ಮುಖ್ಯ ಧ್ಯೇಯವಾಗಿದೆ. ಅಥಣಿ ಸಾಂಸ್ಕೃತಿಕ ಚರಿತ್ರೆಗೆ ದೊರೆತ ಆಕರಗಳ ಆಧಾರದ ಮೇಲೆ ಕ್ರಿ.ಶ.೬ನೇ ಶತಮಾನದಿಂದ ೨೦ನೇ ಶತಮಾನದವರೆಗೆ ಕಾಲ ಮಿತಿಯನ್ನು ಹಾಕಿಕೊಳ್ಳಲಾಗಿದೆ. ಏಕೆಂದರೆ ಕ್ರಿ.ಶ. ೧೦೨೨ ಕ್ಕೆ ಸಂಬಂಧಿಸಿದ ಶಾಸನ ಕೊಟ್ಟಲಗಿಯಲ್ಲಿ ದೊರಕಿದ್ದು ಇದು ಚಾಲುಕ್ಯರ ಅರಸನಾದ ಆರನೆಯ ಶತಮಾನದ ಜಯಸಿಂಹನ ಆಳ್ವಿಕೆಯ ವಿವರಣೆ ನೀಡುತ್ತದೆ.

ಈ ಪ್ರದೇಶದಲ್ಲಿ ಆಡಳಿತ ನಡೆಸಿದ ಅರಸು ಮನೆತನಗಳು ಅಳಿದು ಹೋದನಂತರ ರಾಜ್ಯಭಾರ ಮಾಡಿದವರು ಪ್ರೋರ್ಚುಗೀಸರು ಹಾಗೂ ಬ್ರಿಟೀಷರು ಆದರೆ ಇವರ್‍ಯಾರು ಚಾರಿತ್ರಿಕ ವಿಷಯಗಳ ಅಭಿವ್ಯಕ್ತಿಗೆ ನೆರವಾಗಬಲ್ಲ ಶಾಸನೀಯ ಮತ್ತು ಸ್ಮಾರಕಗಳ ರೂಪದಲ್ಲಿ ಆಧಾರಗಳನ್ನು ಉಳಿಸಿಹೋಗಿಲ್ಲ. ಆದ್ದರಿಂದ ಶಾಸನೀಯ ಹಾಗೂ ಸ್ಮಾರಕಗಳ ಆಧಾರಿತ ಸಾಂಸ್ಕೃತಿಕ ಚರಿತ್ರೆಯ ಅಧ್ಯಯನಕ್ಕೆ ಈ ಮೇಲಿನ ಕಾಲಮಿತಿಯನ್ನು ನಿಗದಿಪಡಿಸಲಾಗಿದೆ.

### ಆಕರ ಸಾಮಗ್ರಿಗಳು (ಮೂಲಾಧಾರಗಳು)

ಗತಕಾಲದ ಚಾರಿತ್ರಿಕ ಘಟನೆಗಳಿಗೆ ಸಂಬಂಧಿಸಿದ ಅಂಶಗಳನ್ನು ಪುನರ್‌ರಚನೆ ಮಾಡಬೇಕಾದರೆ ಆಧಾರಗಳು ಅತೀ ಅವಶ್ಯಕ. ಇವುಗಳನ್ನು ಆಕರಗಳು, ಮೂಲಾಧಾರಗಳೆಂದು ಚರಿತ್ರೆಯಲ್ಲಿ ಹೆಸರಿಸುತ್ತಾರೆ. ಒಂದು ಪ್ರದೇಶದ ಸಾಂಸ್ಕೃತಿಕ ಚರಿತ್ರೆಯಂತಹ ವಿಷಯಗಳನ್ನು ಅಧ್ಯಯನಕ್ಕೆ ಆಯ್ದುಕೊಂಡರೆ ಆ ಪ್ರದೇಶದಲ್ಲಿ ದೊರೆಯುವ ಆಕರ ಸಾಮಗ್ರಿಗಳು ನೀಡುವ ಚಾರಿತ್ರಿಕ ಮಾಹಿತಿಯನ್ನು ಅವಲಂಬಿಸಿ ಸಂಶೋಧಕ ಮುಂದುವರೆಯಬೇಕಾಗುತ್ತದೆ. ಒಂದು ದೇಶದ ಅಥವಾ ನಾಡಿನ ಚರಿತ್ರೆಯ ರಚನೆಯಲ್ಲಿ ಮೂಲಾಧಾರಗಳನ್ನು ಕುಲಂಕುಷವಾಗಿ ಬಳಸಿಕೊಂಡರೆ ಮಾತ್ರ ಭವಿಷ್ಯಕ್ಕೆ ನೈಜ ಚರಿತ್ರೆಯನ್ನು ಒದಗಿಸಬಹುದು. ಈ ಅಧ್ಯಯನದಲ್ಲಿ ಮೂಲಾಧಾರಗಳನ್ನು ಪ್ರಾಥಮಿಕ ಮೂಲಾಧಾರಗಳು ಮತ್ತು ದ್ವಿತೀಯ ಮೂಲಾಧಾರಗಳೆಂದು ವರ್ಗೀಕರಿಸಲಾಗಿದೆ. ಪ್ರಾಥಮಿಕ ಮೂಲಾಧರಗಳೆಂದರೆ : ಪುರಾತತ್ವ ಮೂಲಗಳು –ಭೂ ಉತ್ಖನನಗಳು, ಶಾಸನಗಳು, ಸ್ಮಾರಕಗಳು ಮತ್ತು ನಾಣ್ಯಗಳು. ದ್ವಿತೀಯ ಮೂಲಾಧಾರಗಳೆಂದರೆ : ಸಾಹಿತ್ಯಿಕ ಮೂಲದಿಂದ ಪಡೆದಂತಹ ಆಧಾರಗಳು.

## ಪ್ರಾಥಮಿಕ ಮೂಲಾಧಾರಗಳು

### ಪುರಾತತ್ವ ಮೂಲಗಳು

**ಭೂ-ಉತ್ಖನನಗಳು** : ಶಿಲಾಯುಗದ ಸಂಸ್ಕೃತಿಗೆ ಸೇರಿದ ಅಥಣಿ ತಾಲೂಕಿನ ಸಪ್ತಸಾಗರ ವೆಂಬನೆಲೆಯು ಸೂಕ್ಷ್ಮ ಶಿಲಾಯುಗ ಮತ್ತು ತಾಮ್ರ ಶಿಲಾಯುಗ ಸಂಸ್ಕೃತಿಗೆ ಸೇರಿತ್ತೆಂದು ಪುರಾತತ್ವ ಶಾಸ್ತ್ರಜ್ಞ ಡಾ॥ ಆರ್.ಎಸ್. ಪಂಚಮುಖಿಯವರು ೧೯೪೪ ರಲ್ಲಿ ಇಲ್ಲಿ ನೂತನ ಶಿಲಾಯುಗದ ಅವಶೇಷಗಳನ್ನು ಗುರುತಿಸಿದ್ದಾರೆ. ಈ ಅವಶೇಷಗಳಿಂದ ಪ್ರಸ್ತುತ ಅಧ್ಯಯನದ ಚರಿತ್ರೆ ಕ್ರಿ.ಪೂ. ೨೦೦೦ ದಿಂದ ೧೦೦೦ ದ ವರೆಗೆ ಹಿಂದಕ್ಕೆ ಸಾಗಿದೆ.

ಸತ್ತಿ ಎಂಬ ನೆಲೆಯು ಅಥಣಿ ತಾಲೂಕಿನ ಕೃಷ್ಣಾ ನದಿಯ ಎಡ ದಂಡೆಯ ಮೇಲಿರುವ ಗ್ರಾಮ. ಈ ಗ್ರಾಮದಿಂದ ಉತ್ತರಕ್ಕೆ ೨ ಕಿ.ಮೀ. ದೂರದಲ್ಲಿ ಒಂದು ಪ್ರಾಚೀನ ಜನವಸತಿ ನೆಲೆ ಕಂಡು ಬಂದಿದೆ. ಇಲ್ಲಿ ಪ್ರಾಗೈತಿಹಾಸಿಕ ಕಾಲದ ಬೇರೆ ಬೇರೆ ವರ್ಣಗಳಿಂದ ಕೂಡಿದ ಮೃತ್ ಪಾತ್ರೆಗಳ ಚೂರುಗಳನ್ನು ಕಂಡುಹಿಡಿಯಲಾಗಿದೆ.

ಮಂಗಸೂಳಿ ಎಂಬ ನೆಲೆಯು ಅಥಣಿ ತಾಲೂಕಿನಂದ ೧೮ ಕಿ.ಮೀ. ದೂರದಲ್ಲಿರುವ ಮಹಾರಾಷ್ಟ್ರದ ಗಡಿಗೆ ಹೊಂದಿಕೊಂಡಿರುವ ಗ್ರಾಮ. ಇಲ್ಲಿ ಸೂಕ್ಷ್ಮ ಶಿಲಾಯುಗ (ನವ ಶಿಲಾಯುಗ) ಸಂಸ್ಕೃತಿಗೆ ಸಂಬಂಧಿಸಿದ ಉಪಕರಣಗಳು ಲಭ್ಯವಾಗಿವೆ. ಇಲ್ಲಿ ದೊರೆತಿರುವ ಕೆಂಪು ಹಾಗೂ ಕಂದುಬಣ್ಣದ ಮಡಿಕೆಯ ಚೂರುಗಳು, ಗೋದಿ ಬಣ್ಣದ ಮಡಿಕೆಯ ಚೂರುಗಳು ಮಸ್ಕಿ ಮತ್ತು ಗೋದಾವರಿ ಕೊಳ್ಳದ ಪ್ರದೇಶದಲ್ಲಿ ದೊರೆತ ಮೃತ್ ಪಾತ್ರೆಗಳ ಅವಶೇಷಗಳನ್ನು ಹೋಲುತ್ತವೆ. ಇದೇ ಸಂಸ್ಕೃತಿಗೆ ಸೇರಿದ ಮಡಿಕೆ ಚೂರುಗಳನ್ನು ಕೊಡಗಾನೂರ ಗ್ರಾಮದಲ್ಲಿ ಡಾ॥ ಎಚ್.ಎಸ್. ಕಾಂಬಳೆ ಅವರು ಬೆಳಕಿಗೆ ತಂದಿದ್ದಾರೆ.

ಕಬ್ಬಿಣದ ಬೃಹತ್ ಶಿಲಾ ಸಂಸ್ಕೃತಿಗೆ ಸೇರಿದ ಕೃಷ್ಣಾ ನದಿಯ ಎಡ ದಂಡೆಯಗುಂಟ ಡಾ॥ ಎಚ್.ಎಸ್. ಕಾಂಬಳೆ ಅವರು ಅನ್ವೇಷಣೆ ಕೈಗೊಂಡಾಗ ಈ ಕೆಳಗಿನ ನೆಲೆಗಳು ಬೆಳಕಿಗೆ ಬಂದಿವೆ. ಐನಾಪೂರ, ಐಗಳಿ, ಮಂಗಸೂಳಿ, ಕೊಡಗಾನೂರು, ಬನ್ನೂರು, ತೆಲಸಂಗ ಮತ್ತು ಕೊಟ್ಟಲಗಿ.

**ಶಾಸನಗಳು** : ಅಥಣಿ ಸಾಂಸ್ಕೃತಿಕ ಚರಿತ್ರೆಯಲ್ಲಿ ಅಥಣಿಯನ್ನೊಳಗೊಂಡಂತೆ ಅದರ ಸುತ್ತಮುತ್ತಲಿನ ಗ್ರಾಮಗಳಲ್ಲಿ ಅನ್ವೇಷಣೆ ಮಾಡಿದಾಗ ಕೆಲವು ಪ್ರಾಚೀನ ಶಾಸನಗಳು ಲಭ್ಯವಾಗಿವೆ. ಈ ಶಾಸನಗಳು ಕರ್ನಾಟಕ ಇನ್‌ಸ್ಕ್ರಿಪ್ಷನ್ಸ್ ವ್ಯಾಲ್ಯುಮ್ ನಂ.೨ ಇದರಲ್ಲಿ ಪ್ರಕಟಗೊಂಡಿವೆ.[೨] ಅವುಗಳೆಂದರೆ ಕಲ್ಯಾಣಿ ಚಾಲುಕ್ಯರ ಕಾಲಕ್ಕೆ ಸಂಬಂಧಪಟ್ಟ ಐದು ಶಾಸನಗಳು ದೊರಕಿವೆ. ಅಥಣಿ ತಾಲೂಕಿನ ರಾಮತೀರ್ಥ ಎಂಬಲ್ಲಿ ಒಂದು ಶಾಸನ, ಕೊಕಟನೂರಿನಲ್ಲಿ ಒಂದು ಶಾಸನ ಹಾಗೂ ತೆಲಸಂಗ ಗ್ರಾಮದಲ್ಲಿ ಮೂರು ಶಾಸನಗಳು ಲಭ್ಯವಾಗಿವೆ. ಈ ಶಾಸನಗಳನ್ನು ಡಾ॥ ಆರ್.ಎಸ್. ಪಂಚಮುಖಿಯವರು ಪ್ರಕಟಪಡಿಸಿದ್ದಾರೆ.

ಡಾ॥ ಕೆ.ಜಿ. ಕುಂದಣಕಾರ ಪ್ರಕಟ ಪಡಿಸಿದ *ದಿ. ಇನ್‌ಸ್ಕ್ರಿಪ್ಷನ್ಸ್ ಆಫ್ ನಾರ್ದರ್ನ್ ಕರ್ನಾಟಕ ಆ್ಯಂಡ ಕೊಲ್ಹಾಪೂರ ಸ್ಟೇಟ* ಇದರಲ್ಲಿ ಯಾದವ ವಂಶಕ್ಕೆ ಸೇರಿದ ಶಾಸನ ಕೊಟಕನೂರಿನಲ್ಲಿ ದೊರೆತಿದೆ. ಶಿಲಾಹರರ ಕಾಲಕ್ಕೆ ಸಂಬಂಧಿಸಿದಂತೆ ಅಥಣಿ ತಾಲೂಕಿನ ಜುಗೂಳದಲ್ಲಿ ಶಾಸನ (ಅಪ್ರಕಟಿತ) ದೊರೆತಿದೆ. ಅಲ್ಲದೆ ಶೇಡಬಾಳ ಗ್ರಾಮದಲ್ಲಿ ಒಂದು ಶಾಸನ ಲಭ್ಯವಾಗಿದೆ. ಶ್ರೀ ಎ.ಎಮ್. ಅಣ್ಣಿಗೇರಿ ಹಾಗೂ ಶ್ರೀ ಬಿ. ಆರ್. ಜೋಶಿಯವರು ಬರೆದ *ದಿ. ಇನ್‌ಸ್ಕ್ರಿಪ್ಟಿವ್ ಲಿಸ್ಟ್ ಆಫ್ ಸ್ಟೋನ್ ಆ್ಯಂಡ ಕಾಪರ್ ಪ್ಲೇಟ* ಎಂಬ ವರದಿಯಲ್ಲಿ ಮುರಗುಂಡಿ ತಾಮ್ರಪಟ ಶಾಸನ ಲಭ್ಯವಾಗಿದೆ. ಮುರಗುಂಡಿ ಇದು ಅಥಣಿ ತಾಲೂಕಿನ ಗ್ರಾಮವಾಗಿದೆ.

*ಕರ್ನಾಟಕ ಇನ್‌ಸ್ಕ್ರಿಪ್ಷನ್ ಸಿರಿಜ್* ನಲ್ಲಿ ಮಹಿಷವಾಡಗಿ ಗ್ರಾಮದ ಉಲ್ಲೇಖವಿದೆ. *ಎಪಿಗ್ರಾಫಿಯಾ ಇಂಡಿಕಾ* ಸಂಪುಟ ೩೦ ರಲ್ಲಿ ಯಕ್ಕಂಚಿ ಎಂಬಲ್ಲಿ ಯಾದವರ ಕಾಲದ ಶಾಸನವಿರುವ ಉಲ್ಲೇಖವಿದೆ. ಯಕ್ಕಂಚಿ ಹಾಗೂ ಮಹಿಷವಾಡಗಿ ಗ್ರಾಮಗಳು ಅಥಣಿ ತಾಲೂಕಿನಲ್ಲಿವೆ. ಕಲಚೂರಿ ಮತ್ತು ಯಾದವರ ಶಾಸನಗಳು ಅಥಣಿ ಹೊರಗಿನ ಪ್ರದೇಶವಾದ ಮಹಾರಾಷ್ಟ್ರದ ಜತ್ತ ತಾಲೂಕಿನ ಉಮರಾಣಿಯಲ್ಲಿ ಲಭ್ಯವಾಗಿವೆ. ಈ ಎಲ್ಲ ಶಾಸನಗಳಿಂದ ಲಭ್ಯವಾದ ಮಾಹಿತಿಯನ್ನು ಅಥಣಿ ಸಾಂಸ್ಕೃತಿಕ ಚರಿತ್ರೆ ರಚನೆಗೆ ಆಖರವಾಗಿ ಬಳಸಿಕೊಳ್ಳಲಾಗಿದೆ. ಇತ್ತೀಚಿಗೆ ಡಾ॥ ಹಣಮಾಕ್ಷಿ ಗೋಗಿ ಯವರು ಐನಾಪೂರದಲ್ಲಿ ಕೆಲವು ಜೈನ ಪ್ರಶಸ್ತಿ (ಅಪ್ರಕಟಿತ) ಗಳನ್ನು ಪತ್ತೆ ಹಚ್ಚಿದ್ದಾರೆ. ೪ ಅಥಣಿ ತಾಲೂಕಿನ ಬಳ್ಳಿಗೇರಿಯಲ್ಲಿ ಕಲ್ಯಾಣಿ ಚಾಲುಕ್ಯರ ಎರಡು ಶಾಸನಗಳು (ಅಪ್ರಕಟಿತ) ದೊರೆಕಿವೆ. ಈ ಎಲ್ಲ ಶಾಸನಗಳ ಸಹಾಯದಿಂದ ಅಥಣಿ ಸಾಂಸ್ಕೃತಿಕ ಚರಿತ್ರೆಯನ್ನು ರಚಿಸಲಾಗಿದೆ.

**ನಾಣ್ಯಗಳು** : ವ್ಯಾಪಾರದಲ್ಲಿ ವಸ್ತುವಿನಿಮಯ ಪದ್ಧತಿ ಕಣ್ಮರೆಯಾದ ನಂತರ ಇದಕ್ಕೆ ಪರ್ಯಾಯವಾಗಿ ನಾಣ್ಯಗಳು ವಿನಿಮಯದ ಮಾಧ್ಯಮಗಳಾಗಿ ಚಲಾವಣೆಗೆ ಬಂದವು. ಆಯಾ ಪರದೇಶಗಳಲ್ಲಿ ದೊರೆತ ನಾಣ್ಯಗಳು ಆ ಪ್ರದೇಶಗಳ ಜನರ ಧಾರ್ಮಿಕ, ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿಯನ್ನು ತಿಳಿಸುವ ಪ್ರಮುಖ ಸಾಧನಗಳಾಗಿವೆ. ಅಥಣಿ ಪ್ರದೇಶದಲ್ಲಿ ದೊರೆತ ಶಾಸನಗಳಲ್ಲಿ ಕೆಲವು ನಾಣ್ಯಗಳ ಹೆಸರುಗಳು ಉಲ್ಲೇಖವಾಗಿವೆ. ಪ್ರಮುಖವಾಗಿ *ಹಗ* ಎಂಬ ನಾಣ್ಯ ಮೇಲಿಂದ ಮೇಲೆ ಉಲ್ಲೇಖವಾಗಿದೆ.[೫] ಇವುಗಳ ಸಹಾಯದಿಂದ ಇಲ್ಲಿನ ಜನರ ಆರ್ಥಿಕ, ಧಾರ್ಮಿಕ ಮತ್ತು ವ್ಯಾಪಾರಿ ಚಟುವಟಿಕೆಗಳನ್ನು ತಿಳಿದುಕೊಳ್ಳಲು ಸಹಾಯಕವಾಗಿದೆ.

**ಸ್ಮಾರಕಗಳು** : ಒಂದು ನಾಡಿನ ಸಂಸ್ಕೃತಿಯ ಭವ್ಯ ಪರಂಪರೆಯ ಪ್ರತೀಕಗಳೆಂದರೆ ಸ್ಮಾರಕಗಳು. ಕೆಲವು ಸಲ ಶಾಸನಗಳಲ್ಲಿ ಲಭ್ಯವಾಗದ ಮತ್ತು ಅಪೂರ್ಣವಾದ ಮಾಹಿತಿಗಳನ್ನು, ಸ್ಮಾರಕಗಳು ಒದಗಿಸುವ ಮಾಹಿತಿಗಳಿಂದ ಪೂರ್ಣಗೊಳಿಸಿಕೊಳ್ಳಬಹುದು. ಪ್ರಾಚೀನ ಸ್ಮಾರಕಗಳ ಅಧ್ಯಯನದಿಂದ ಅಂದಿನ ಜನರ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಕಲಾಭಿರುಚಿ ಹಾಗೂ ಕಲಾ ನೈಪುಣ್ಯತೆಗಳನ್ನು ಗುರುತಿಸಲು ಸಾಧ್ಯವಾಗುತ್ತದೆ.

ಅಥಣಿ ಸಾಂಸ್ಕೃತಿಕ ಚರಿತ್ರೆ ಅಧ್ಯಯನಕ್ಕೆ ಒಳಪಡಿಸಿದ ಅನೇಕ ಸ್ಥಳಗಳು ಸಾಂಸ್ಕೃತಿಕವಾಗಿ ಶ್ರೀಮಂತ ಪ್ರದೇಶವಾಗಿದ್ದವು. ಉದಾಹರಣೆಗೆ ಕೊಕಟನೂರಿನ ಕಲ್ಮೇಶ್ವರ ದೇವಾಲಯ ಕಲ್ಯಾಣಿ ಚಾಲುಕ್ಯರ ಕಾಲದಾಗಿದ್ದು ಸುಂದರವಾದ ಗರ್ಭಗೃಹ, ಮುಖಮಂಟಪ ಮತ್ತು ನವರಂಗವನ್ನು ಹೊಂದಿದ್ದು ಸೂಕ್ಷ್ಮವಾದ ಕೆತ್ತನೆಯಿಂದ ಕೂಡಿದ ಕಂಬಗಳಿಂದ ರಚನೆಯಾಗಿದೆ. ಈ ದೇವಾಲಯಕ್ಕೆ ಶಿಖರವಿಲ್ಲ.

ಸತ್ತಿ ಗ್ರಾಮದಲ್ಲಿ ಬದರಿ ನಾರಾಯಣ ದೇವಾಲಯವಿದ್ದು, ಇದು ತ್ರಿಕೂಟ ಮಾದರಿಯದಾಗಿದ್ದು ಬ್ರಹ್ಮ, ವಿಷ್ಣು, ಮಹೇಶ್ವರರ ಮೂರ್ತಿ ಶಿಲ್ಪಗಳು ಇಲ್ಲಿ ಸ್ಥಾಪಿಸಲ್ಪಟ್ಟಿವೆ. ಈ ದೇವಾಲಯದ ಮೇಲೆ ಶಿಖರ ಇರುವುದಿಲ್ಲ.

ರಾಮತೀರ್ಥದ ಉಮಾರಾಮೇಶ್ವರ ದೇವಾಲಯ ಈ ದೇವಾಲಯ ಚಾಲುಕ್ಯ ಚಕ್ರವರ್ತಿ ೬ ನೇ ವಿಕ್ರಮಾದಿತ್ಯನ ಕಾಲದಲ್ಲಿ ನಿರ್ಮಾಣವಾಗಿದ್ದು ವಿಶಾಲವಾದ ನವರಂಗವನ್ನು ಹೊಂದಿದೆ. ಗರ್ಭಗೃಹದಲ್ಲಿ ಎತ್ತರವಾದ ಈಶ್ವರ ಲಿಂಗವಿದೆ. ಅಂದವಾದ ಮುಖ ಮಂಟಪವಿದ್ದು ಇದರ ಮೇಲೆ ಚಾಲುಕ್ಯರ ಶಿಖರವನ್ನು ನಿರ್ಮಿಸಿದ್ದಾರೆ.

ಅಥಣಿ ತಾಲೂಕಿನಲ್ಲಿ ಚಾಲುಕ್ಯರ ಕಾಲದ ಇನ್ನೊಂದು ಪ್ರಾಚೀನ ಗ್ರಾಮ ಬಳ್ಳಿಗೇರಿ. ಇಲ್ಲಿ ಬಸವಣ್ಣ ದೇವಾಲಯವಿದ್ದು ಗರ್ಭಗೃಹ ಮುಖಮಂಟಪವನ್ನು ಹೊಂದಿದೆ. ಮುಖ ಮಂಟಪದಲ್ಲಿಯ ಕಂಬಗಳು ಸುಂದರ ಕೆತ್ತನೆಯ ಸೂಕ್ಷ್ಮ ಶೈಲಿಯನ್ನು ಹೊಂದಿದ್ದು ಅವುಗಳನ್ನು ತಟ್ಟಿದರೆ ನಾದ ಸೂಸುವದು ವಿಶೇಷವಾದ ಸಂಗತಿಯಾಗಿದೆ.[೬]

ಅಥಣಿ ತಾಲೂಕಿನ ಸುತ್ತಮುತ್ತಲಿನ ಇನ್ನು ಕೆಲವು ದೇವಾಲಯಗಳು ಚರಿತ್ರೆಯ ದೃಷ್ಟಿಯಿಂದ ಮಹತ್ವದ ಸ್ಮಾರಕಗಳಾಗಿವೆ. ಉದಾಹರಣೆಗೆ ಶೇಡಬಾಳದ ಬಸವಣ್ಣ ದೇವಾಲಯ, ಕೊಟ್ಟಲಗಿಯ ಕೊಟ್ಟಲಿಂಗೇಶ್ವರ ದೇವಾಲಯ, ಸವದಿಯ ಗೋಪಾಳಕೃಷ್ಣ ದೇವಾಲಯ, ಕಾಗವಾಡದ ಕಗ್ಗುಡರಾಯನ ದೇವಾಲಯ, ಐನಾಪೂರದ ಬಸವಣ್ಣ ದೇವಾಲಯ ಮುಂತಾದವುಗಳು.

ಮದನಭಾವಿಯ ಕಲ್ಮೇಶ್ವರ ದೇವಾಲಯ ಕಲ್ಯಾಣಿ ಚಾಲಕ್ಯರ ಕಾಲದ ದೇವಾಲಯವಾಗಿದ್ದು ಇದು ಅತೀ ಪ್ರಾಚೀನ ದೇವಾಲಯವೆಂದು ಗುರುತಿಸಲಾಗಿದೆ. ಇದರ ವಾಸ್ತುವಿನ ಮೇಲ್ಭಾವಣೆ ಕುಶಿಯುವ ಹಂತದಲ್ಲಿದೆ. ಅಥಣಿ ತಾಲೂಕಿನ ಮದಭಾವಿ ಗ್ರಾಮ ಪ್ರಾಚೀನ ಕಾಲದಲ್ಲಿ ಮದನಭಾವಿಯಾಗಿತ್ತು. ಅಥಣಿಯ ಅಮೃತಲಿಂಗೇಶ್ವರ ದೇವಾಲಯ, ಸಿದ್ಧೇಶ್ವರ ದೇವಾಲಯ, ಪುರಾತನೇಶ್ವರ ಮಠ ಮತ್ತು ಗಚ್ಚಿನ ಮಠ, ದೇಸಗತ್ತಿಗಳ ಕಾಲದ ವಾಡೆಗಳು,(ಚಿತ್ರ-೧೮) ಆದಿಲ್‌ಷಾಹಿಗಳ ಕಾಲದ ಕೋಟೆ ಹಾಗೂ ದರ್ಗಾಗಳು, ಇಸ್ಲಾಮಿಕ್ ಕಟ್ಟಡಗಳು ಈ ಪ್ರದೇಶದಲ್ಲಿ ಹೇರಳವಾಗಿ ದೊರೆಯುತ್ತವೆ.[೭] ಒಟ್ಟಿನಲ್ಲಿ ಅಥಣಿ ಸಾಂಸ್ಕೃತಿಕ ಚರಿತ್ರೆಯ ಅಧ್ಯಯನಕ್ಕೆ ಸ್ಮಾರಕಗಳ ಕೊರತೆ ಕಂಡುಬರುವುದಿಲ್ಲ ಎಂದು ಹೇಳಬಹುದು.

**ವೀರಗಲ್ಲುಗಳು :** ಅಥಣಿ ಸಾಂಸ್ಕೃತಿಕ ಚರಿತ್ರೆಗೆ ವಿವಿಧ ಪ್ರಾಚ್ಯ ಆಧರಗಳಲ್ಲಿ ವೀರಗಲ್ಲುಗಳು ಸೀಮಿತ ಪ್ರದೇಶದಲ್ಲಿ ಲಭ್ಯವಾಗಿವೆ. ಶಾಸನ ಹಾಗೂ ಸ್ಮಾರಕಗಳಂತೆ ಚರಿತ್ರೆ ಅಧ್ಯಯನಕ್ಕೆ ಇವುಗಳ ಕೊಡುಗೆ ಮಹತ್ತರವಾದುದು. ಯುದ್ಧದಲ್ಲಿ ವೀರಾವೇಶದಿಂದ ಹೊರಾಡಿ ಮಡಿದ ವೀರನ ಸಾವಿಗೆ ದ್ಯೋತಕವಾಗಿ ಇವುಗಳನ್ನು ಸ್ಥಾಪಿಸಲಾಗಿರುತ್ತದೆ. ತಾನು ಜನಸಿದ್ದ ಸ್ಥಳದ ಬಗ್ಗೆ ಹಾಗೂ ತನ್ನ ಒಡೆಯನ ಬಗ್ಗೆ ಆ ಯೋಧ ಹೊಂದಿದ್ದ ಅಭಿಮಾನವನ್ನು ಈ ವೀರಗಲ್ಲುಗಳು ಪ್ರತಿಬಿಂಬಿಸುತ್ತವೆ. ತನಗೆ ವಹಿಸಿದ ಕರ್ತವ್ಯದ ಪಾಲನೆಗೆ ಪ್ರಾಣತೊರೆಯಲು ಹಿಂಜರಿಯದೆ ಸಾವು ಸಹಜ ಕ್ರಿಯೆ ಎಂಬಂತೆ ಭಾವಿಸಿ ಅವರು ಹೋರಾಡಿ ಮಡಿದು ಅಮರರಾಗಿರುತ್ತಾರೆ.

ಅಥಣಿ ಸಾಂಸ್ಕೃತಿಕ ಚರಿತ್ರೆಯ ಅಧ್ಯಯನದ ಪ್ರದೇಶದಲ್ಲಿ ಹಲವು ವೀರಗಲ್ಲುಗಳು ಕಂಡುಬಂದಿವೆ. ಅಡಹಳ್ಳಿ ವೀರಗಲ್ಲು ಇದು ಆಂಜನೆಯನ ದೇವಾಲಯ ಎದುರುಗಡೆ ಸ್ಥಾಪನೆಯಾಗಿದೆ. ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಈ ಪ್ರದೇಶದ ಜನರು ಯುದ್ಧದಲ್ಲಿ ಹೋರಾಡಿ ವೀರ ಮರಣ ಹೊಂದಿದ ಸ್ಮರಣೆಗಾಗಿ ಈ ಸ್ಮಾರಕಗಳನ್ನು ನೆಟ್ಟಿದ್ದಾರೆ. ಅಥಣಿ ತಾಲೂಕಿನ ಸತ್ತಿಗ್ರಾಮದಲ್ಲಿ ಒಂದು, ಅನಂತಪೂರದಲ್ಲಿ ಮೂರು ವೀರುಗಲ್ಲುಗಳು ಅನ್ವೇಷಣೆಯಾಗಿವೆ. ಸಾಂಸ್ಕೃತಿಕ ಚರಿತ್ರೆ ಅಧ್ಯಯನದಲ್ಲಿ ವೀರಗಲ್ಲುಗಳ ಸಹಾಯದಿಂದ ಅಂದಿನ ಜನರು, ವೀರ ಸಾವನ್ನೂ ಕೂಡ ಅಪಾರವಾಗಿ ಗೌರವಿಸುತ್ತಿದ್ದರೆಂದು ತಿಳಿದುಬರುತ್ತದೆ.

ಸ್ಮಾರಕಗಳ ಹೊರತಾಗಿ ಮಧ್ಯಕಾಲಿನ ಅವಧಿಗೆ ಸಂಬಂದಿಸಿದ ದೇಸಾಯಿಗಳ ಆಳ್ವಿಕೆ ಕೇಂದ್ರಗಳಾದ ಅಥಣಿ, ಅನಂತಪೂರ ಹಾಗೂ ಮಂಗಸೂಳಿಗಳಲ್ಲಿ ವಾಡೆಗಳು (ಅನುಬಂಧ) ಮತ್ತು ಆದಿಲ್‌ಷಾಹಿ ಆಳ್ವಿಕೆಗೆ ಸಂಬಂಧಿಸಿದ ದೇವಾಲಯಗಳು (ಚಿತ್ರ-೭) ಮಸೀದಿಗಳು, ದರ್ಗಾಗಳು, ಬ್ರಿಟೀಷ ಕಾಲದ ಶೈಕ್ಷಣಿಕ ಕಟ್ಟಡಗಳು,(ಚಿತ್ರ-೫) ಮುನ್ಸಿಪಲ್ ಕಟ್ಟಡಗಳು ಈ ಪ್ರದೇಶದ ಸಾಂಸ್ಕೃತಿಕ ಚರಿತ್ರೆಯ ಅಧ್ಯಯನಕ್ಕೆ ಮಹತ್ವದ ಆಕರಗಳಾಗಿವೆ.

## ಅಧ್ಯಯನದ ವಿಧಾನ

ಪ್ರಸ್ತುತ ಅಧಯನದ ವಿಷಯವು ಸಾಂಸ್ಕೃತಿಕ ಚರಿತ್ರೆಗೆ ಸಂಬಂಧಿಸಿದ್ದಾಗಿರುವುದರಿಂದ ಅಥಣಿ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ದೊರೆತ ಮಾಹಿತಿಗಳನ್ನು ಸಂಗ್ರಹಿಸಿ ವ್ಯವಸ್ಥಿತವಾಗಿ ಪರಾಮರ್ಶಿಸುವ ಪ್ರಾಮಾಣಿಕ ಪ್ರಯತ್ನ ಮಾಡಲಾಗಿದೆ. ಈ ಕಾರ್ಯಕ್ಕೆ ಸ್ವತಹ ತೊಡಗಿಸಿಕೊಂಡು ಈ ಬೆಳವಲನಾಡಿನ ಭೌಗೋಳಿಕ ಹಿನ್ನೆಲೆ, ಚಾರಿತ್ರಿಕ ಪರಂಪರೆಯನ್ನು ಅರಿಯುವುದರ ಜೊತೆಗೆ ಪ್ರಮುಖ ಚಾರಿತ್ರಿಕ ಶಾಸನಗಳ ನೆಲೆಗಳು, ದೇವಾಲಯಗಳು, ಗುಡಿ-ಗೋಪುರಗಳು, ಕೋಟೆ ಕೊತ್ತಲುಗಳಿಗೆ ಸಂದರ್ಶಿಸಿ ಮಾಹಿತಿ ಕಲೆಹಾಕಲಾಗಿದೆ. ಈ ಪ್ರದೇಶದ ಚಾರಿತ್ರಿಕ ಅಧ್ಯಯನದಲ್ಲಿ ಪಾರಂಪರಿಕ ಕಟ್ಟಡಗಳು ಮತ್ತು ಪ್ರಮುಖ ದೇವಾಲಯಗಳು, ದೇಸಾಯಿ ವಾಡೆಗಳು ಪ್ರಮಾಣಭೂತವಾದ ಆಕರಗಳಾಗಿರುವುದರಿಂದ ಒಂದೊಂದು ವಿಷಯಕ್ಕೆ ಸಂಬಂಧಿಸಿದ ವಿವಿಧ ಮಾಹಿತಿ ಸಂಗ್ರಹಣೆಗೆ ಪ್ರಾಮಾಣಿಕ ಪ್ರಯತ್ನ ಮಾಡಲಾಗಿದೆ.

## ಅಧ್ಯಯನದ ಸ್ವರೂಪ

ಅಥಣಿ ಸಾಂಸ್ಕೃತಿಕ ಚರಿತ್ರೆಯನ್ನು ಆರು ಅಧ್ಯಾಯಗಳಲ್ಲಿ ವಿಂಗಡಿಸಿ ಅಧ್ಯಯನ ಮಾಡಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ , ಅಧ್ಯಯನದ ಉದ್ದೇಶ ಮತ್ತು ಅವಶ್ಯಕತೆ , ಅಧ್ಯಯನದ ವ್ಯಾಪ್ತಿ, ಅಧ್ಯಯನದ ಉದ್ದೇಶ, ಅಧ್ಯಯನಕ್ಕೆ ಬಳಸಿದ ಆಕರ ಸಾಮಗ್ರಿಗಳು , ಅಧ್ಯಯನದ ವಿಧಾನ, ಅಧ್ಯಯನದ ಸ್ವರೂಪ ಮತ್ತು ಪೂರ್ವ ಪ್ರಯತ್ನಗಳ ಸಮೀಕ್ಷೆ ಮಾಡಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಅಥಣಿ ಭೌಗೋಳಿಕ ಪರಿಸರ ಮತ್ತುಅಥಣಿ ಪರಿಸರದ ಪ್ರಮುಖ ಚಾರಿತ್ರಿಕ ನೆಲೆಗಳನ್ನು ವಿವರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಅಥಣಿ ಸಾಂಸ್ಕೃತಿಕ ಪರಂಪರೆಯಲ್ಲಿ ರಾಜಕೀಯ , ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ವ್ಯವಸ್ಥೆಯನ್ನು ಕುರಿತು ವಿವರಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಅಥಣಿ ಶೈಕ್ಷಣಿಕ ಹಾಗೂ ಸಾಹಿತ್ಯದ ಬೆಳವಣಿಗೆಯನ್ನು ವಿವರಸಿಲಾಗಿದೆ.

ಐದನೆಯ ಅಧ್ಯಾಯದಲ್ಲಿ ಅಥಣಿ ಪರಿಸರದ ಪ್ರಮುಖ ಪ್ರಾಚೀನ ದೇವಾಲಯಗಳು ಮತ್ತು ಮಠಗಳನ್ನು ಕುರಿತು ವಿವರಸಲಾಗಿದೆ.

ಆರನೇಯ ಅಧ್ಯಾಯದಲ್ಲಿ ಒಟ್ಟು ಸಂಶೋಧನೆಯ ಫಲಿತವನ್ನು ವಿವರಿಸಲಾಗಿದೆ.

## ಪೂರ್ವ ಪ್ರಯತ್ನಗಳ ಸಮೀಕ್ಷೆ

ಅಥಣಿ ಪರಿಸರದ ಸಾಂಸ್ಕೃತಿಕ ಚರಿತ್ರೆಯ ಅಧ್ಯಯನಕ್ಕಿಂತ ಮುಂಚೆ ಈ ಪ್ರದೇಶದಲ್ಲಿ ಮೊದಲು ಕೈಗೊಂಡ ಸಂಶೋಧನಾ ಕಾರ್ಯಗಳನ್ನು ಅವಲೋಕಿಸುವದು ಅವಶ್ಯವಾದುದು. ಬೆಳಗಾವಿ ಜಿಲ್ಲೆಯ ಗಡಿ ಭಾಗದಲ್ಲಿರುವ ಅಥಣಿ ಪ್ರದೇಶದ ಹಲವಾರು ಗ್ರಾಮಗಳಲ್ಲಿ ಚರಿತ್ರೆಯ ವಿದ್ವಾಂಸರು ಅಧ್ಯಯನ ಕೈಗೊಂಡಿದ್ದಾರೆ.

ಡಾ॥ ಆರ್. ಎಸ್. ಪಂಚಮುಖಿಯವರು ಅಥಣಿ ಪರಿಸರದ ಶಾಸನಗಳ ಅಧ್ಯಯನ ಕೈಗೊಂಡು, ದೊರೆತ ಶಾಸನಗಳನ್ನು ಕರ್ನಾಟಕದ ಶಾಸನ ಸಂಪುಟದಲ್ಲಿ ಪ್ರಕಟಿಸಿದ್ದಾರೆ.

ಡಾ॥ ಎಚ್. ಎಸ್. ಕಾಂಬಳೆಯವರು ಸಂಶೋಧನೆ ಕೈಗೊಂಡು ಸೂಕ್ಷ್ಮ ಶೀಲಾಯುಗದ ನೆಲೆಗಳನ್ನು ಪತ್ತೆ ಹಚ್ಚಿದ್ದಾರೆ.

ಡಾ॥ ಅ. ಸುಂದರ ಅವರು ಅಥಣಿ ತಾಲೂಕಿನ ಕೃಷ್ಣಾ ನದಿತೀರದ ಗ್ರಾಮಗಳಾದ ಐನಾಪೂರ , ಸತ್ತಿ ಹಾಗೂ ಶೇಗುಣಿಸಿ ಗ್ರಾಮಗಳಲ್ಲಿ ಅನ್ವೇಷಣೆ ಮಾಡಿ ಸೂಕ್ಷ್ಮ ಶಿಲಾಯುಗದ ಮಾನವನ ನೆಲೆಗಳನ್ನು ಬೆಳಕಿಗೆ ತಂದಿದ್ದಾರೆ.

ಡಾ॥ ಶ್ರೀನಿವಾಸ ರಿತ್ತಿ ಅವರು ಈ ಪ್ರದೇಶದಲ್ಲಿ ಸಂಶೋಧನೆ ಕೈಗೊಂಡು ತಾಮ್ರ ಪ್ರಶಸ್ತಿಗಳನ್ನು ಬೆಳಕಿಗೆ ತಂದಿದ್ದಾರೆ.

ಈ ಪ್ರದೇಶದಲ್ಲಿ ನಡೆದ ಇತ್ತೀಚಿನ ಸಂಶೋಧನೆಗಳೆಂದರೆ ಪ್ರೊ. ವಿಲಾಶ ಕಾಂಬಳೆಯವರು ಅಥಣಿ ಪ್ರದೇಶದ ಗ್ರಾಮಗಳ ಸಾಂಸ್ಕೃತಿಕ ಅಧ್ಯಯನ ಕೈಗೊಂಡಿದ್ದಾರೆ. ಅಲ್ಲದೆ ಪ್ರೊ ಮಾಂಗರವರು ಅಥಣಿ ಪ್ರದೇಶದ ದೇವಾಲಯಗಳ ಬಗ್ಗೆ ವಿಶೇಷ ಅಧ್ಯಯನ ಮಾಡಿದ್ದಾರೆ.

ಪ್ರೋ. ಶ್ರೀಶೈಲ ದೇವರಡ್ಡಿಯವರು ಅಥಣಿ ತಾಲೂಕಿನ ದೇಶಗತ್ತಿಗಳ ಬಗ್ಗೆ ಅಧ್ಯಯನ ಮಾಡಿದ್ದಾರೆ. ಹೀಗೆ ಸಾಮಾನ್ಯವಾಗಿ ಬಡಿಬಡಿಯಾಗಿ ಈ ಪ್ರದೇಶದ ಚಾರಿತ್ರಕ ಅಧ್ಯಯನ ಸಾಗಿದೆ. ಒಟ್ಟಾರೆ ಈ ಪ್ರದೇಶದ ಸಾಂಸ್ಕೃತಿಕ ಚರಿತ್ರೆಯನ್ನು ಈ ಮೇಲಿನ ಎಲ್ಲ ಪೂರ್ವ ಪ್ರಯತ್ನಗಳನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ.

★★★

## ಅಡಿ ಟಿಪ್ಪಣಿಗಳು

೧) ಪಂಚಮುಖಿ ಆರ್. ಎಸ್. -೧೯೬೭

ಕರ್ನಾಟಕ ಇತಿಹಾಸ -ಪು. ೪೬

೨) ಡಾ|| ಕಾಂಬಳೆ ಎಚ್. ಎಸ್. -೧೯೯೬,

ಅರ್ಕಿಯಾಲಾಜಿ ಆಫ್-ದಿ ಅಪರ್ ಕೃಷ್ಣೆ ರೀಜನ್

(ಟ್ರೆಲ್ಲಮ್. ಅಸ್ಟಿಕ್ಟ್) ಸಮ್ ಆಸ್ಥೆಕ್ಟ್ (ಸಂಶೋಧನಾ ಮಹಾಪ್ರಬಂಧ).

೩) ಕರ್ನಾಟಕ ಇನಸ್ಕ್ರಿಪ್ತನ್ಸೆ ವಾಲ್ಯೂಂ ನಂ -೨

೪) ಡಾ|| ಹನುಮಾಕ್ಷಿ ಗೋಗಿ -

ಐನಾಪೂರದ ಶಾಸನಗಳು ವಿಮೋಚನಾ ಪ್ರಕಾಶನ ಅಥಣಿ-೨೦೦೭

ಸಂ-ಡಾ|| ವ್ಹಿ.ಎಸ್. ಮಾಳಿ

ಪು. ೪೪-೪೯.

೫) ಕರ್ನಾಟಕ ಇನ್‌ಸ್ಕ್ರಿಪ್‌ನ್ಸ ವಾಲ್ಯೂ ನಂ. ೨

ಶಾಸನ ಸಂಖ್ಯೆ : ೨೧

ಪು. ೭೯-೮೦

೬) ಅನ್ಯೂಪಿಲ್ ರಿಪೋರ್ಟ -೧೯೫೩ -೫೭

ಪುಟ -೩೫

೭) ಶರಣ ಚೇತನ -

ಲೇಖನ : ಮೋಹನ ಅನೇಪ್ಪನವರ

ಸಂಚಿಕೆ : ೧೨

ಸಂ. : ೫

ಪು : ೧೧

# ಅಧ್ಯಾಯ-೨

# ಅಥಣಿಯ ಭೌಗೋಳಿಕ ಪರಿಸರ ಮತ್ತು ಚಾರಿತ್ರಿಕ ನೆಲೆಗಳು

## ಅಥಣಿ ಭೌಗೋಳಿಕ ಪರಿಸರ

ಮಾನವ ಪ್ರಕೃತಿಯ ಶಿಶು ಎಂದು ಈಗಾಗಲೇ ಆತನ ಸಾಧನಗಳ ಚರಿತ್ರೆಯಿಂದ ತಿಳಿಯುತ್ತದೆ. ಮಾನವನ ಜೀವನದ ಪ್ರತಿ ಚಟುವಟಿಕೆಗಳ ಮೇಲೆ ಭೌಗೋಳಿಕ ಅಂಶಗಳ ಪ್ರಭಾವ ಮಹತ್ವದ ಪರಿಣಾಮವನ್ನುಂಟು ಮಾಡುತ್ತಿದೆ. ಆದ್ದರಿಂದಲೇ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಮಾನವ ಜೀವನ ಶೈಲಿ ವಿಭಿನ್ನವಾಗಿರುವುದು ಕಂಡುಬರುತ್ತದೆ. ಮನುಷ್ಯನ ಮೂಲ ಅವಶ್ಯಕತೆಗಳಾದ ಆಹಾರ, ಬಟ್ಟೆ ಮತ್ತು ವಸತಿಗಳ ಮೇಲಷ್ಟೆ ಭೌಗೋಳಿಕ ಪ್ರಭಾವವಲ್ಲದೆ, ಆತನ ಮಹೋನ್ನತ ಸಾಧನಗಳಾದ ಕಲೆ, ವಿಜ್ಞಾನ, ಸಾಹಿತ್ಯ ಮತ್ತು ಸಾಂಸ್ಕೃತಿಕ ರಂಗಗಳ ಮೇಲೆಲ್ಲಾ ಆಯಾ ಪ್ರದೇಶದ ಭೌಗೋಳಿಕ ಪರಿಸರದ ಪ್ರಭಾವ ಹಾಸು ಹೊಕ್ಕಿರುತ್ತದೆ.

ಇಂದು ಮಾನವ ತಾಂತ್ರಿಕ ಕೌಶಲ್ಯಗಳ ಕ್ಷೇತ್ರಗಳಲ್ಲಿ ಬಹು ಮುಂದೆ ಸಾಗಿ ಅಗಾಧ ಸಾಧನೆ ಮಾಡಿದ್ದಾನೆ. ಆತನ ಅನ್ವೇಷಣೆ ಮತ್ತು ಸಾಧನೆಗಳು ಪ್ರತಿನಿತ್ಯ ಹೊಸ ಹೊಸ ರೂಪ ಪಡೆಯುತ್ತೀವೆ. ಇಂದು ಅತ್ಯಂತ ಸುಧಾರಣೆಗೊಂಡ ಮಾನವನ ನಾಗರಿಕತೆಯ ಉತ್ಕೃಷ್ಟ ಮಟ್ಟಕ್ಕೆ ಎರಡು ಪ್ರಮುಖ ಅಂಶಗಳು ಕಾರಣವಾಗಿವೆ. ಒಂದು ವೈವಿಧ್ಯಮಯವಾದ ನೈಸರ್ಗಿಕ ಸಂಪನ್ಮೂಲಗಳು, ಎರಡು ಶ್ರೇಷ್ಠ ಬೌದ್ಧಿಕ ಶಕ್ತಿಪೂರಿತ ಮಾನವ ಸಂಪನ್ಮೂಲ. ಹೀಗಾಗಿ ಯಾವುದೇ ಒಂದು ಪ್ರದೇಶದ ಆರ್ಥಿಕತೆಯನ್ನಾಗಲಿ, ಸಾಮಾಜಿಕ ಸ್ಥಿತಿಯನ್ನಾಗಲಿ, ಉದ್ಯೋಗ ಮತ್ತು ಸಾಂಸ್ಕೃತಿಕ ಅಂಶಗಳನ್ನಾಗಲಿ ಅಭ್ಯಸಿಸುವಾಗ ಅಲ್ಲಿನ ಭೌಗೋಳಿಕ ಹಿನ್ನೆಲೆಯನ್ನು ಗಮನಿಸುವದು ಅತ್ಯಂತ ಅಗತ್ಯವಾದ ಕಾರ್ಯವಾಗಿದೆ. ಅಂದಾಗ ಮಾತ್ರ ಆ ಪ್ರದೇಶದ ಸಮಗ್ರ ಸಾಂಸ್ಕೃತಿಕ ಅಧ್ಯಯನ ಸಾಧ್ಯವಾಗುತ್ತದೆ.

ಕರ್ನಾಟಕ ರಾಜ್ಯವು ವೈವಿಧ್ಯಮಯ ಪ್ರಾಕೃತಿಕ ಸ್ವರೂಪವನ್ನು ಹೊಂದಿರುವ ರಾಜ್ಯ. ಭೂಮಿಯ ಸ್ವರೂಪದ ಆಧಾರದ ಮೇಲೆ ರಾಜ್ಯವನ್ನು ಸ್ಥೂಲವಾಗಿ ಮೂರು ವಿಭಾಗಗಳಲ್ಲಿ ವಿಂಗಡಿಸಲಾಗಿದೆ.

1) ಕರಾವಳಿ ಪ್ರದೇಶ

2) ಮಲೆನಾಡು ಪ್ರದೇಶ

3) ಮೈದಾನ ಅಥವಾ ಪ್ರಸ್ಥಪ್ರದೇಶ

ಬೆಳಗಾವಿ ಜಿಲ್ಲೆಯ ನೈಋತ್ಯ-ಪಶ್ಚಿಮದ ಘಟ್ಟ ಪ್ರದೇಶವನ್ನು ಹೊರತುಪಡಿಸಿ ಉಳಿದೆಲ್ಲ

ಭಾಗ ಮೈದಾನ ಪ್ರದೇಶದಲ್ಲಿ ಹಂಚಿಕೆಯಾಗಿದೆ. ಇದರಲ್ಲಿ ವಿಶೇಷವಾಗಿ ಅಥಣಿ ಪರಿಸರ ಪೂರ್ಣವಾಗಿ ಮೈದಾನ ಪ್ರದೇಶದ ಭಾಗವಾಗಿದ್ದು ಕಪ್ಪು ಶಿಲೆಗಳಿಂದ (ಬಸಾಲ್ಟ) ನಿರ್ಮಿತವಾಗಿದೆ.

**ಸ್ಥಾನ ಸನ್ನಿವೇಶ**

ಪ್ರಪಂಚದಲ್ಲಿ ಯಾವುದೇ ಒಂದು ಪ್ರದೇಶವನ್ನು ಎರಡು ಮಾನದಂಡಗಳಿಂದ ಗುರುತಿಸಲಾಗುತ್ತದೆ. ಒಂದು ಆಡಳಿತಾತ್ಮಕವಾಗಿ (ರಾಜಕೀಯ ವಿಭಾಗ) ಉದಾಹರಣೆಗೆ ದೇಶ, ರಾಜ್ಯ, ಜಿಲ್ಲೆ, ತಾಲೂಕು ಇತ್ಯಾದಿ. ಇನ್ನೊಂದು ಭೌಗೋಳಿಕ ವಲಯವಾಗಿ ಉದಾಹರಣೆಗೆ ಹಿಮಾಲಯ ಭಾಗ, ಪಶ್ಚಿಮ ಘಟ್ಟಗಳ ವಲಯ, ಕರಾವಳಿ ಪ್ರದೇಶ ಇತ್ಯಾದಿ. ಪ್ರತಿಯೊಂದು ಪ್ರದೇಶ ಇನ್ನೊಂದು ಪ್ರದೇಶಕ್ಕಿಂತ ಭಿನ್ನವಾಗಿದ್ದು ತನ್ನದೇ ಆದ ಭೌಗೋಳಿಕ ವೈಶಿಷ್ಟ್ಯತೆಯನ್ನು ಹೊಂದಿರುತ್ತದೆ. ಇದಕ್ಕೆ ಆ ಪ್ರದೇಶ ಹೊಂದಿರುವ ಸ್ಥಾನಿಕರಣವೇ ಕಾರಣವಾಗಿರುತ್ತದೆ. ಅಥಣಿ ತಾಲೂಕು ೧೬°-೩೦ ಉತ್ತರ ಅಕ್ಷಾಂಶದಿಂದ ೧೬°-೫೮ ಉತ್ತರ ಅಕ್ಷಾಂಶಗಳ ಮಧ್ಯೆ ಹಾಗೂ ೭೪°-೪೦ ಪೂರ್ವ ರೇಖಾಂಶದಿಂದ ೭೫°-೨೭ ಪೂರ್ವ ರೇಖಾಂಶಗಳ ಮಧ್ಯದಲ್ಲಿ ಹರಡಿಕೊಂಡಿದೆ. ಸಮುದ್ರ ಮಟ್ಟದಿಂದ ಸರಾಸರಿ ೪೫೦°. ೮೦೦ ಮೀ. ಎತ್ತರದಲ್ಲಿದೆ.[೧]

**ವಿಸ್ತೀರ್ಣ**

ಅಥಣಿ ತಾಲೂಕು ಬೆಳಗಾವಿ ಜಿಲ್ಲೆಯ ೧೦ ತಾಲೂಕುಗಳಲ್ಲಿ ಅತೀ ಹೆಚ್ಚು ವಿಸ್ತೀರ್ಣ ಹೊಂದಿದ ಪ್ರದೇಶ. ಇದರ ಒಟ್ಟು ವಿಸ್ತೀರ್ಣ ೧೯೯೫.೭ ಚ.ಕಿ. ಮೀಟರವಿದ್ದು, ಇದು ಒಟ್ಟು ಜಿಲ್ಲೆಯ ವಿಸ್ತೀರ್ಣದ ಶೇಕಡಾ ೧೪.೮೭ ರಷ್ಟಿರುತ್ತದೆ. ತಾಲೂಕಿನ ಮಳೆಯ ಪ್ರಮಾಣ ೫೮೭.೯ ಮಿ.ಮೀ ಇದ್ದು ಇದು ಜಿಲ್ಲೆಯ ಸರಾಸರಿ (೫೯೯ ಮಿ.ಮೀ.) ಮಳೆಯ ಪ್ರಮಾಣಕ್ಕಿಂತ ಕಡಿಮೆಯಾಗಿದೆ.

**ತಾಲೂಕಿನ ಗಡಿಗಳು**

ಬೆಳಗಾವಿ ಜಿಲ್ಲೆಯ ಉತ್ತರ ಸೀಮೆಯ ಈ ತಾಲೂಕು ಮಹಾರಾಷ್ಟ್ರಕ್ಕೆ ಹೊಂದಿಕೊಂಡಿರುವದರಿಂದ ಗಡಿ ಜಿಲ್ಲೆಯ ಗಡಿ ತಾಲೂಕಾಗಿದೆ. ಉತ್ತರ ಮತ್ತು ಪಶ್ಚಿಮದಲ್ಲಿ ಮಹಾರಾಷ್ಟ್ರವಿದ್ದು, ಉತ್ತರದಲ್ಲಿ ಸಾಂಗ್ಲಿ ಜಿಲ್ಲೆಯ ಜತ್ತ ಮತ್ತು ಮಿರಜ ತಾಲೂಕುಗಳು, ಪಶ್ಚಿಮದಲ್ಲಿ ಕೊಲ್ಹಾಪೂರ ಜಿಲ್ಲೆಯ ಶಿರೋಳ ತಾಲೂಕು ಅಥಣಿ ತಾಲೂಕಿನ ಗಡಿಗಳಾಗಿವೆ. ಈಶಾನ್ಯ ಮತ್ತು ಪೂರ್ವಕ್ಕೆ ಬಿಜಾಪೂರ ಜಿಲ್ಲೆ ಸೀಮೆಯಾದರೆ ಆಗ್ನೇಯದಲ್ಲಿ ಬಾಗಲಕೋಟ ಜಿಲ್ಲೆಯ ಜಮಖಂಡಿ ತಾಲೂಕು ಸೀಮೆಯಾಗಿದೆ. ನೈಋತ್ಯದಲ್ಲಿ ಚಿಕ್ಕೋಡಿ ತಾಲೂಕು ಸೀಮೆಯಾಗಿದ್ದರೆ ದಕ್ಷಿಣಕ್ಕೆ ರಾಯಬಾಗ ತಾಲೂಕು ಸೀಮೆಯಾಗಿದೆ.

**ಭೂ-ರಚನೆ**

ಬೆಳಗಾವಿ ಜಿಲ್ಲೆಯ ಒಟ್ಟು ಶಿಲಾ ರಚನೆಯಲ್ಲಿ ಪ್ರಮುಖವಾಗಿ ಕಂಡುಬರುವ ಶಿಲಾ ವರ್ಗಗಳೆಂದರೆ ಧಾರವಾಡ ಶ್ರೇಣಿ, ನೈಸ್ (ಸ್ಪಟಿಕ ಪಟ್ಟಿಶಿಲೆ) ರಚನೆ, ಕಲಾದಗಿ ಶ್ರೇಣಿ ಹಾಗೂ ದಖನ್ ಪದರುಗಳಲ್ಲಿ (ಡೆಕನ್ ಟ್ರ್ಯಾಪ್). ಅಥಣಿ ತಾಲೂಕು ದಖನ್ ಪದರುಗಳು (೨) ಪ್ರದೇಶದಲ್ಲಿ

ಹಂಚಿಕೆಯಾಗಿದೆ. ಇದು ಮಧ್ಯ ಜೀವಿಕಲ್ಪದ (ಮೆಸೊಜೊವಿಕ್) ಅಂತ್ಯಭಾಗದಲ್ಲಿ ಅಂದರೆ ಸುಮಾರು ೨೫೦ ಕೋಟಿ ವರ್ಷದ ಹಿಂದೆ ಸಂಭವಿಸಿದ ಭೂ ಚಲನೆ ಮತ್ತು ಜ್ವಾಲಾ ಮುಖಿಯಿಂದಾಗಿ ಅಪಾರ ಶಿಲಾರಸ ಹೊರ ಚಿಮ್ಮಿತು. ಹೀಗೆ ಹೊರಬಂದ ಲಾವಾರಸ ಅಂತರ್ಗತವಾಗಿ ಘನಿರ್ಭವಿಸಿ, ಕಾಲಾನಂತರದಲ್ಲಿ ದಖನ್ ಪದರುಗಲ್ಲುಗಳಾಗಿ ಪರಿವರ್ತನೆಯಾಗಿವೆ. ಮಟ್ಟಸ (ಪದರು) ರಚನೆ ಇದರ ವಿಶೇಷ ಗುಣಧರ್ಮವಾಗಿದ್ದು, ಅದು ಹಲವಾರು ವಿಧಗಳಲ್ಲಿ ಕಂಡುಬರುತ್ತದೆ. ಮುಖ್ಯವಾದವುಗಳೆಂದರೆ ಬಸಾಲ್ಟ (ಕಪ್ಪು ಶಿಲೆ) ಆಮ್ಲದ ಲೊಯಿಡ್, ವೆಸಿಕುಲರ ಮತ್ತು ಜೇಡಿ ಪದರುಗಲ್ಲು.

ದಖನ್ ಪದರುಗಳು ವಾತಾವರಣದ ಹೊಡೆತದಿಂದ (ಶಿಥಲೀಕರಣದ ಶಕ್ತಿಗಳಿಂದ) ಪುನರಾವರ್ತಿತ ಶಿಥಲೀಕರಣ ಕ್ರಿಯೆಗೆ ಸಿಲುಕಿದ್ದರಿಂದ ಕಪ್ಪು ಹಾಗು ಕಂದು ಬಣ್ಣದ ಮಣ್ಣು ಸಂಮೃದ್ಧವಾಗಿ ನಿರ್ಮಾಣಗೊಂಡಿದೆ. ಈ ಕ್ರಿಯೆಗಳಿಂದಾಗಿ ಹೆಚ್ಚು ಮಣ್ಣುಗಳಿರುವ ಪ್ರದೇಶದಲ್ಲಿ ಶಿಲೆಗಳು ಮುಚ್ಚಿ ಹೋಗಿರುವದು ಸಾಮಾನ್ಯವಾಗಿ ಕಂಡುಬರುತ್ತದೆ. ತೇವವಾದಾಗ ಈ ಮಣ್ಣು ಉಬ್ಬಿ ಕೊಳ್ಳುವದು ಇದರ ವಿಶೇಷ ಗುಣಧರ್ಮವಾಗಿದೆ. ದಖನ್ ಪದರುಗಳಲ್ಲಿರುವ ಶಿಲೆಗಳು ಕಠಿಣವಾಗಿದ್ದು, ಗಟ್ಟಿಯಾದ ರಚನೆಯಿಂದ ಕೂಡಿವೆ. ಈ ಶಿಲೆಗಳು (ದಖನ್ ಪದರುಗಲ್ಲುಗಳು) ರಚನೆಯಾದ ನಂತರ ಈ ಪ್ರದೇಶದ ಯಾವುದೇ ಸ್ಥಳದಲ್ಲಿ ಬೇರೆ ಶಿಲಾವರ್ಗವಿಲ್ಲ ಎಂಬುದು ಗಮನಾರ್ಹವಾದುದು. ಚಿಕ್ಕೋಡಿ ಮತ್ತು ಗೋಕಾಕ ತಾಲೂಕಿನಲ್ಲಿ ಬೆಟ್ಟ ಶ್ರೇಣಿಯಲ್ಲಿ ಸ್ಪಷ್ಟವಾಗಿರುವಷ್ಟು ಈ ಶಿಲಾವರ್ಗ ಅಥಣಿ ತಾಲೂಕಿನಲ್ಲಿ ಸ್ಪಷ್ಟವಾಗಿ ಮೇಲ್ಮೈಯಲ್ಲಿ ಗೋಚರಿಸುವುದಿಲ್ಲ. ಈ ಶಿಲಾವರ್ಗದಲ್ಲಿ ಪಳಿಯುಳಿಕೆಗಳು ಸಂಚಿತವಾಗಿರುವ ಸಾಧ್ಯತೆಯಿರುವ ದೃಷ್ಟಿಯಿಂದ ಈ ಶಿಲೆಗಳು ಮಹತ್ವ ಪಡೆದುಕೊಂಡಿವೆ.

**ಅಥಣಿ ಪ್ರಾಕೃತಿಕ ಸ್ವರೂಪ**

ಪ್ರಾಕೃತಿಕವಾಗಿ ಬೆಳಗಾವಿ ಜಿಲ್ಲೆಯನ್ನು ಮುಖ್ಯವಾಗಿ ಮೂರು ವಲಯಗಳನ್ನಾಗಿ ಗುರುತಿಸಬಹುದು.

1) ಪಶ್ಚಿಮ ಘಟ್ಟವಲಯ

2) ಅರೆ ಮಲೆನಾಡು

3) ಶುಷ್ಕ ಮೈದಾನ ವಲಯ

ಅಥಣಿ ತಾಲೂಕಿನ ಪೂರ್ಣಭಾಗ ಶುಷ್ಕ ಮೈದಾನವಲಯದಲ್ಲಿ ಸ್ಥಾಪಿತಗೊಂಡಿದೆ. ಕೃಷ್ಣಾನದಿಯು ಉತ್ತರಕ್ಕೆ ಹರಡಿಕೊಂಡಿರುವ ತಾಲೂಕಿನ ಭೂ-ಪ್ರದೇಶ ಅಲ್ಲಲ್ಲಿ ಏರು ಪೇರುಗಳಿಂದ ಕೂಡಿದ್ದು, ಬಿಟ್ಟರೆ ಸಮತಟ್ಟಾದ ಮೈದಾನ ಪ್ರದೇಶವಾಗಿದೆ. ಪಶ್ಚಿಮದಿಂದ ಪೂರ್ವಕ್ಕೆ ನಿಧಾನವಾಗಿ ಇಳಿಜಾರು ಹೊಂದಿದೆ.

ಅಥಣಿ ತಾಲೂಕನ್ನು ಪ್ರಾಕೃತಿಕವಾಗಿ ಎರಡು ಭಾಗಗಳಾಗಿ ವಿಂಗಡಿಸಬಹುದು.

1) ಉತ್ತರದ ಮತ್ತು ಈಶಾನ್ಯದ ಪೀಠಭೂಮಿ.

2) ಮೈದಾನ ಪ್ರದೇಶ.

ತಾಲೂಕಿನ ಉತ್ತರ ಮತ್ತು ಈಶಾನ್ಯದಲ್ಲಿ ಭೂ-ಪ್ರದೇಶ ಸಮುದ್ರ ಮಟ್ಟದಿಂದ ೬೦೦ ರಿಂದ ೬೦೦ ಮೀ. ಎತ್ತರವಾಗಿದ್ದು. ಏರು ಪೇರುಗಳಿಂದ ಕೂಡಿದೆ. ಅಥಣಿ ನಗರದ ಸುತ್ತುಮುತ್ತಲು ಉನ್ನತ ಪ್ರದೇಶ ಬೆಟ್ಟ-ಶ್ರೇಣಿಗಳ ರೂಪದಲ್ಲಿ ಗೋಚರಿಸಿದೆ. ಮೈದಾನ ಪ್ರದೇಶವು ಅಥಣಿ ತಾಲೂಕಿನ ಪೂರ್ವ, ನೈಋತ್ಯ, ಪಶ್ಚಿಮ ಭಾಗಗಳೆಲ್ಲ ಮೈದಾನದಿಂದ ಕೂಡಿವೆ. ಇಲ್ಲಿನ ಭೂಮಟ್ಟದ ಎತ್ತರ ಸಮುದ್ರ ಮಟ್ಟದಿಂದ ೨೦೦ ರಿಂದ ೬೦೦ ಮೀ. ಎತ್ತರವಾಗಿದ್ದು ಮೈದಾನದ ಪೂರ್ವದಲ್ಲಿ ಗರಸು ಪ್ರದೇಶ ಯಥೇಚ್ಛವಾಗಿದೆ. ಉತ್ತರದಲ್ಲಿ ಕೆಂಪು ಮಣ್ಣಿನ ಪ್ರದೇಶವಿದೆ. ದಕ್ಷಿಣ ಭಾಗವು ಕೃಷ್ಣಾನದಿಯ ಮೆಕ್ಕಲಿನಿಂದ ಕೂಡಿದ್ದು ಸಮತಲವಾದ ಬೇಸಾಯದ ಪ್ರದೇಶವಾಗಿದೆ.

## ವಿಚ್ಛಿನ್ನ ಬೆಟ್ಟಗಳು

ಅಥಣಿ ನಗರದ ಸುತ್ತಮುತ್ತಲು ಹಾಗೂ ವಾಯವ್ಯ ದಿಕ್ಕಿನಲ್ಲಿ ಸಾತಾರ ವಲಯದಿಂದ ಸಾಗಿಬಂದ ವಿಚ್ಛಿನ್ನ ಬೆಟ್ಟಶ್ರೇಣಿ ಕಂಡು ಬರುತ್ತದೆ. ಚಪ್ಪಟೆ ಹಾಗೂ ಬೋಳಾಗಿರುವ ಮರಳು ಗಲ್ಲುಗಳ ಈ ಬೆಟ್ಟಗಳು ಸ್ವಾಭಾವಿಕ ಸಸ್ಯವರ್ಗದ ಗತಿಯಿಂದ ಗುರುತಿಸಲ್ಪಡುತ್ತವೆ. ಸ್ಪಷ್ಟವಾಗಿ ಇಂತಹ ಶ್ರೇಣಿ ಬೆಟ್ಟಕ್ಕೆ ಉದಾಹರಣೆ ಎಂದರೆ ಅಥಣಿಯಿಂದ ವಾಯವ್ಯಕ್ಕೆ ೨೫ ಕಿ.ಮೀ. ಅಂತರದಲ್ಲಿರುವ ಬೆಳ್ವಂಕಿ ಗುಡ್ಡ. ಇದು ಸಮುದ್ರ ಮಟ್ಟದಿಂದ ೨೦೫ ಮೀ. ಎತ್ತರದಲ್ಲಿದೆ.

## ವಾಯುಗುಣ

ಜಿಲ್ಲೆಯ ಶುಷ್ಕ ಮೈದಾನದಲ್ಲಿರುವ ಅಥಣಿ, ರಾಯಬಾಗ, ಗೋಕಾಕ, ರಾಮದುರ್ಗ ಮತ್ತು ಸವದತ್ತಿ ತಾಲೂಕುಗಳ ವಾಯುಗುಣ ಒಂದೇ ವಿಧವಾಗಿದೆ. ಅಂದರೆ ದಖನ್ ಪ್ರದೇಶದ ಶುಷ್ಕ ಭಾಗಗಳಂತೆ ಸಾಮಾನ್ಯವಾಗಿ ಒಣ ಹಾಗೂ ಆರೋಗ್ಯಕರವಾದ ವಾಯುಗುಣವಿದೆ. ತಾಲೂಕಿನಲ್ಲಿ ಬೇಸಿಗೆ ಕಾಲ ಫೆಬ್ರುವರಿ ಮಧ್ಯಭಾಗದಿಂದಲೇ ಪ್ರಾರಂಭವಾಗಿ ಮೇ ತಿಂಗಳ ಕೊನೆಯ ವರೆಗೆ ಕೆಲವು ಸಲ ಜೂನ್ ತಿಂಗಳ ಮೊದಲವಾರದವರೆಗೆ ವಿಸ್ತರಿಸುತ್ತದೆ. ಮುಂಗಾರು ಮಳೆಗಾಲದ ಅವಧಿ ಜೂನ್‌ದಿಂದ ಸಪ್ಟೆಂಬರ ಕೊನೆಯ ವರೆಗೆ ಇರುತ್ತದೆ. ಚಳಿಗಾಲದ ಅವಧಿ ಸಪ್ಟೆಂಬರದಿಂದ ಫೆಬ್ರುವರಿ ವರೆಗೆ ಕಂಡುಬರುತ್ತದೆ.

## ಮಳೆ ಪ್ರಮಾಣ

ಅಥಣಿ ತಾಲೂಕಿನ ಬಹುಭಾಗ ಬರಗಾಲ ಪ್ರದೇಶವೆಂದೇ ಹೆಸರುವಾಸಿಯಾಗಿದೆ. ೧೮೭೬ ರಲ್ಲಿ ಅಥಣಿ ಪರಿಸರದಲ್ಲಿ ವಾರ್ಷಿಕ ೩೪' ಗಳಷ್ಟು ಮೆಳೆ ಯಾಗಿರುವದನ್ನು ಕಾಣಬಹುದು ಅಲ್ಲದೆ ೧೮೭೮ ರಲ್ಲಿ ವಾರ್ಷಿಕವಾಗಿ ಅತ್ಯಂತ ಕಡಿಮೆ ಮಳೆ ೧೯'' ದಾಖಲಾಗಿದೆ. ಒಟ್ಟಾರೆ

ತಾಲೂಕಿನ ತಾಲೂಕಿನ ವಾರ್ಷಿಕ ಸರಾಸರಿ ಮಳೆಯ ಪ್ರಮಾಣ ೫೮೭ ಮಿ.ಮೀ. ಇದೆ. ಆದರೆ ೧೯೦೧ ರಿಂದ ೨೦೦೧ ರ ವರೆಗಿನ ಅಂಕಿ ಅಂಶ ನೋಡಿದರೆ ಕೆಲವೊಮ್ಮೆ ಅತ್ಯಲ್ಪ ಮತ್ತು ಕೆಲವು ಸಲ ಮಳೆಯಾಗದ ವರ್ಷಗಳು ಉಂಟು. ಹೀಗಾಗಿ ಅಥಣಿ ತಾಲೂಕು ಮೇಲಿಂದ ಮೇಲೆ ಬರದ ದವಡೆಗೆ ಸಿಲಕುತ್ತಿರುತ್ತದೆ. ತಾಲೂಕಿನಲ್ಲಿ ಮಳೆಯ ಪ್ರಮಾಣವನ್ನು ಅಳೆಯಲು ೧೦ ವೃಷ್ಟಿಮಾನ ಕೇಂದ್ರಗಳಿವೆ. ಸಪ್ಟೆಂಬರ ತಿಂಗಳಲ್ಲಿ ಹೆಚ್ಚು ಮಳೆಯಾಗುತ್ತದೆ.

**ಉಷ್ಣಾಂಶ**

ಇಲ್ಲಿಯ ಸರಾಸರಿ ಗರಿಷ್ಠ ಉಷ್ಣಾಂಶ ೩೦.೨ ಸೆಂಟಿಗ್ರೇಡ್ ಹಾಗೂ ಕನಿಷ್ಠ ೧೮ ಸೆಂಟಿಗ್ರೇಡ್ ಇದೆ. ಆದರೆ ತಾಲೂಕಿನ ಉಷ್ಣಾಂಶದ ಹಂಚಿಕೆಯಲ್ಲಿ ಏರುಪೇರು ಕಂಡುಬರುತ್ತದೆ. ಬೇಸಿಗೆಯಲ್ಲಿ ಅನೇಕ ಸಲ ೪೦ ಸೆಂಟಿಗ್ರೇಡ್ ಕ್ಕಿಂತ ಹೆಚ್ಚು ಉಷ್ಣಾಂಶ ದಾಖಲಾಗಿದೆ. ಅಂತೆಯೆ ಕನಿಷ್ಠ ಉಷ್ಣಾಂಶವು ಜಿಲ್ಲೆಯ ಸರಾಸರಿಗಿಂತ ಕೆಲವು ಸಲ ಹೆಚ್ಚು ದಾಖಾಲಾಗಿದೆ. ಬೇಸಿಗೆ ತೀವ್ರವಾಗಿರುವ ಕರ್ನಾಟಕ ರಾಜ್ಯದ ಹಲವು ತಾಲೂಕುಗಳಲ್ಲಿ ಇದು ಒಂದಾಗಿದೆ.

**ಜಲ ಸಂಪತ್ತು**

ಕರ್ನಾಟಕ ರಾಜ್ಯದ ಪ್ರಮುಖ ನದಿಗಳಲ್ಲೊಂದಾದ ಕೃಷ್ಣಾನದಿ ಅಥಣಿ ತಾಲೂಕಿನ ಜೀವ ವಾಹಿನಿಯಾಗಿದೆ. ಜಾನಪದ ಚರಿತ್ರೆಯಲ್ಲಿ ಇದನ್ನು ಹಿರೇಹೊಳೆ, ಪರ್ದೊರೆ ಎಂಬ ಅನ್ವರ್ಥಕ ನಾಮಗಳಿಂದ ಗುರುತಿಸಲಾಗಿದೆ. ಅಥಣಿ ತಾಲೂಕಿನ ದಕ್ಷಿಣ ಗಡಿಯಾಗಿ ತಾಲೂಕಿನಲ್ಲಿ ಸುಮಾರು ೨೦ ಕಿ.ಮೀ. ಉದ್ದವಾಗಿ ಪ್ರವಹಿಸಿದೆ. ನೆರೆಯ ಮಹಾರಾಷ್ಟ್ರ ರಾಜ್ಯದ ಸತಾರ ಜಿಲ್ಲೆಯ ಮಹಾಬಳೇಶ್ವರ ಎಂಬ ಸೈಹ್ಯಾದ್ರಿ ಶ್ರೇಣಿಯ ಮಹದೇವ ಬೆಟ್ಟಗಳಲ್ಲಿ ಕೃಷ್ಣಾನದಿ ಉಗಮಿಸಿದೆ. ಸಮುದ್ರ ಮಟ್ಟದಿಂದ ಇದರ ಉಗಮ ಸ್ಥಳ ಸುಮಾರು ೧೩೩೬.೫ ಮೀ. ಎತ್ತರದಲ್ಲಿದೆ. ಪೌರಾಣಿಕ ಹಿನ್ನೆಲೆಯಲ್ಲಿ ಈ ನದಿಯನ್ನು ನೋಡಿದಾಗ ಸ್ವತಃ ವಿಷ್ಣು ಇದನ್ನು ಸೃಷ್ಟಿಸಿದ್ದು, ವಿಷ್ಣುವಿನ ಇನ್ನೊಂದು ಅವತಾರ ಕೃಷ್ಣಾವತಾರ, ಅಂದರೆ ಕೃಷ್ಣನನ ಹೆಸರು ಈ ನದಿಗೆ ಬಂದಿದೆ ಎಂಬ ಪ್ರತೀತಿ ಇದೆ.

ಕೃಷ್ಣಾನದಿ ಕರ್ನಾಟಕವನ್ನು ಪ್ರವೇಶಿಸುವುದು ಅಥಣಿ ತಾಲೂಕಿನ ಮಂಗಾವತಿ ಎಂಬ ಗ್ರಾಮದ ಬಳಿ. ನಂತರ ಚಿಕ್ಕೋಡಿ, ರಾಯಬಾಗ ತಾಲೂಕುಗಳಲ್ಲಿ ಹಾಯ್ದು ದೀರ್ಘವಾಗಿ (೨೦ ಕಿ.ಮೀ.) ಅಥಣಿ ತಾಲೂಕಿನಲ್ಲೇ ಪ್ರವಹಿಸಿದೆ.

ಅಥಣಿ ಪಟ್ಟಣದಿಂದ ನೈಋತ್ಯಕ್ಕೆ ೧೦ ಕಿ.ಮೀ. ದೂರದಲ್ಲಿ ಕೃಷ್ಣಾ ನದಿಯನ್ನು ಅಗ್ರಾಣಿ ಎಂಬ ಹಳ್ಳ ಬಂದ ಸೇರುತ್ತದೆ. ಈ ಸ್ಥಳ ತೀರ್ಥ ಅಥವಾ ಬಾಗವಾಡ ಎಂದು ಗುರುತಿಸಲ್ಪಟ್ಟಿದೆ. ಅಗ್ರಾಣಿ ಇದು ಸಾಂಗ್ಲಿ ಜಿಲ್ಲೆಯಿಂದ ಹರಿಯುತ್ತ ಅನೇಕ ತೊರೆಗಳಿಂದ ಸಮೃದ್ಧವಾಗಿ ಕೃಷ್ಣೆ ಸೇರಿ ನದಿಯ ಪಾತ್ರವನ್ನು ಹೆಚ್ಚಿಸಿದೆ. ತಾಲೂಕಿನ ದಕ್ಷಿಣ ಭಾಗದಲ್ಲಿ ಕೃಷಿ ಹಾಗೂ ಕುಡಿಯುವ ನೀರಿನ ಪೂರೈಕೆಗೆ ಕೃಷ್ಣೆಯೇ ಆಧಾರವಾಗಿದ್ದಾಳೆ. ಏತ ನೀರಾವರಿಗಳ ಮೂಲಕ ಅಥಣಿ ತಾಲೂಕಿನ ಉತ್ತರ ಭಾಗಕ್ಕೂ ಕೃಷ್ಣೆಯನ್ನು ತಲುಪಿಸುವ ಯೋಜನೆಗಳು ಅಸ್ತಿತ್ವಕ್ಕೆ ಬಂದಿವೆ.

**ಡೋಣಿ** : 'ಡೋಣಿ ಬೆಳೆದರೆ ಓಣಿಯಲ್ಲಾ ಕಾಳು' ಎಂಬ ಗಾದೆ. ಉತ್ತರ ಕರ್ನಾಟಕದಲ್ಲಿ ಪ್ರಚಲಿತವಿದೆ. ಇದು ಡೋಣಿ ನದಿಯ ಇಕ್ಕೆಲಗಳಲ್ಲಿರುವ ಮಾತು. ಆದರೆ ಈ ಡೋಣಿ ನದಿಯ ಪಾತ್ರ ತಾಲೂಕಿನಲ್ಲಿ ಸೀಮಿತವಾಗಿದೆ. ಮಹಾರಾಷ್ಟ್ರದ ಸಾಂಗ್ಲಿ ಜಿಲ್ಲೆಯ ಜತ್ತ ಪಟ್ಟಣದಿಂದ 7 ಕಿ.ಮೀ. ಅಂತರದಲ್ಲಿ ಹುಟ್ಟಿ ದಕ್ಷಿಣಾಭಿಮುಖವಾಗಿ ಹರಿಯುತ್ತ ಅಥಣಿ ತಾಲೂಕನ್ನು ಈಶಾನ್ಯದಲ್ಲಿ ಪ್ರವೇಶಿಸಿ 10 ಕಿ.ಮೀ. ಉದ್ದ ಪ್ರವಹಿಸಿದೆ. ಅರೆ ಕಾಲಿಕ ನದಿಯೂ ಡೋಣಿಯಿಂದ ಪ್ರಯೋಜನೆ ಪಡೆಯಬೇಕಾದರೆ ಬಾಂಧಾರ, ಚೆಕ್ ಡ್ಯಾಮಗಳ ನಿರ್ಮಾಣ ಅವಶ್ಯವಾಗಿದೆ.

**ಸ್ವಾಭಾವಿಕ ಸಸ್ಯವರ್ಗ**

ಸ್ವಾಭಾವಿಕ ಸಸ್ಯವರ್ಗದ ಕೊರತೆಯಿಂದ ಅಥಣಿ ತಾಲೂಕು ತೀವ್ರ ಕೊರತೆಯನ್ನು ಹೊಂದಿದೆ. ತಾಲೂಕಿನ ಒಟ್ಟು ವಿಸ್ತೀರ್ಣದ ಕೇವಲ ಶೇಕಡಾ 0.29 ರಷ್ಟು ಅರಣ್ಯವಿದೆ. ಇದು ಪರಿಸರ ಸಮತೋಲನಕ್ಕೆ ಏನೇನೂ ಸಾಲದು. ಕನಿಷ್ಠ ಶೇಕಡಾ 33 ರಷ್ಟಾದರೂ ಅರಣ್ಯ ಬೇಕು. ತಾಲೂಕಿನಲ್ಲಿ ಯಾವುದೇ ರಕ್ಷಿತ ಕಾಯ್ದಿಟ್ಟ ಅರಣ್ಯ ಪ್ರದೇಶಗಳಿಲ್ಲ. ಜಿಲ್ಲೆಯ ಶೇಕಡಾ 0.30 ರಷ್ಟು ಅರಣ್ಯ ಮಾತ್ರ ತಾಲೂಕಿನಲ್ಲಿದೆ. ಎಂದರೆ ಸ್ವಾಭಾವಿಕ ಸಸ್ಯವರ್ಗದ ಸಂಪತ್ತು ಅತೀ ಕಡಿಮೆಯಾಗಿರುವುದು ಕಂಡುಬರುತ್ತದೆ.

ಅಥಣಿ ತಾಲೂಕಿನ ಅರಣ್ಯ ಪ್ರದೇಶವನ್ನು ಉಷ್ಣವಲಯ ಭೂಮಿ (ಶುಷ್ಕ) ಮುಳ್ಳು ಕಂಟಿ (ಸಚ) ವಿಭಾಗಕ್ಕೆ ಸೇರಿಸಬಹುದು. ಕೃಷ್ಣಾನದಿ ತೀರ ಹಾಗೂ ಮೈದಾನದಲ್ಲಿ ಸ್ವಲ್ಪ ಸಸ್ಯವರ್ಗ ದಟ್ಟವಾಗಿದೆ. ಬೆಟ್ಟಗುಡ್ಡಗಳ ಪ್ರದೇಶದಲ್ಲಿ ಸಾಮಾನ್ಯವಾಗಿ ಕಂಡುಬರುವ ಸಸ್ಯಗಳು ಮಾಶ್ವಾಲ, ತುಗ್ಗಿ, ಕಾಕ್ಕೆ, ದಿಂಡಾಲ, ಬೇವು, ಖೈರ, ಬಲ್ಲಾದ, ಸಾಗವಾನಿ, ಶ್ರೀಗಂಧ, ಬಂದಾತಿ, ತಾರವಾಡ, ಕವಲಿ ಮುಂತಾದವು.

ಮೈದಾನ ಪ್ರದೇಶದಲ್ಲಿ ಜಾಲಿ, ಹುಲಗಲಿ ನೆರಲ, ಬೇವು, ಶ್ರೀಗಂಧ, ಹುಣಸೆ, ಬೋರ, ಆಲ, ಬಿದಿರು ಮುಂತಾದವು. ಸ್ವಾಭಾವಿಕ ಸಸ್ಯವರ್ಗದ ಅಭಿವೃದ್ಧಿಯು ಪರಿಸರ ಸಮತೋಲನ ಅಷ್ಟೇ ಅಲ್ಲದೆ ಹೈನುಗಾರಿಕೆ ಹಾಗೂ ಕೆಲವು ಉದ್ಯೋಗಗಳಿಗೆ ಮೂಲಾಧಾರವಾಗಿದೆ. ಸಮಗ್ರ ಅರಣ್ಯ ಯೋಜನೆಯೊಂದು ತಾಲೂಕಿನಲ್ಲಿ ಕಾರ್ಯರೂಪಕ್ಕೆ ಬರುವುದು ಇಂದಿನ ಅಗತ್ಯವಾಗಿದೆ.

**ಪ್ರಾಣಿ ಸಂಪತ್ತು**

ಸದಾಕಾಲ ಬರಗಾಲಕ್ಕೆ ತುತ್ತಾಗುತ್ತಿರುವ ಅಥಣಿ ತಾಲೂಕಿನಲ್ಲಿ ಅರಣ್ಯ ಪ್ರದೇಶವೇ ವಿರಳವಾಗಿರುವುದರಿಂದ ವನ್ಯ ಜೀವಿಗಳ ಸಂಖ್ಯೆ ಮತ್ತು ವೈವಿಧ್ಯತೆ ಕಡಿಮೆಯಿದೆ. ಕಾಡುಗಳಲ್ಲಿ ಕತ್ತೆ ಕಿರುಬ, ತೋಳ, ನರಿ, ಮುಳ್ಳಹಂದಿ, ಚಿಗರೆ, ಕಾಡುಹಂದಿ, ಮೊಲ ಮಂಗ, ನವಿಲು, ಕೌಜುಗ, ಪುರಲೆ ಹಕ್ಕಿ ಪಾರಿವಾಳಗಳು ಕಲ್ಲುಕೋಳಿ, ಹೆಬ್ಬಾವು, ನಾಗರಹಾವು ಮುಂತಾದ ಪ್ರಾಣಿ ಪಕ್ಷಿ ವರ್ಗ ಇದೆ. ಕಳೆದ ಶತಮಾನ ಹಾಗೂ ಅದಕ್ಕಿಂತ ಪೂರ್ವದಲ್ಲಿ ಅನೇಕ ವರ್ಗದ ವನ್ಯ ಜೀವಿಗಳು ಇಂದು ಕಂಡುಬರುತ್ತಿಲ್ಲ.

### ಮಣ್ಣು ಮತ್ತು ಖನಿಜ ಸಂಪತ್ತು

ಅಥಣಿ ತಾಲೂಕಿನಲ್ಲಿ ಬಸಾಲ್ಟ ಶಿಲೆಯಿಂದ ಉದ್ಭವಿಸಿದ ಕಪ್ಪು ಮಣ್ಣು ಅಲ್ಲದೇ ಕೆಂಪು ಮಣ್ಣು ತಾಲೂಕಿನಲ್ಲಿ ಹೆಚ್ಚಾಗಿ ಹಂಚಿಕೆಯಾಗಿದೆ. ಅನೇಕ ಬೆಟ್ಟ ಪ್ರಸ್ತಭೂಮಿ ಪ್ರದೇಶದಲ್ಲಿ ಜೆಲ್ಲಿ (ಗರಸು) ಹರಡಿದ್ದು ತೋಟಗಾರಿಕೆಗೆ ಉತ್ತಮವಾಗಿದೆ. ಕೃಷ್ಣಾ ತೀರದ ಉತ್ತರ ಭಾಗದಲ್ಲಿ ಕಪ್ಪು ಹಾಗೂ ಮೆಕ್ಕಲು ಸಂಚಯನ ಅಧಿಕವಾಗಿದ್ದು ಅಥಣಿ ತಾಲೂಕಿನ ಉತ್ತರ ಭಾಗದಲ್ಲಿ ಕಂದು, ಕೆಂಪು ಮಣ್ಣಿನ ಹಂಚಿಕೆ ಇದೆ.

ಇಲ್ಲಿರುವ ಖನಿಜ ಸಂಪತ್ತಿನಲ್ಲಿ ವೈವಿಧ್ಯತೆಯಾಗಲಿ ಸಮೃದ್ಧಿಯಾಗಲಿ ಕಂಡು ಬರುವದಿಲ್ಲ. ಕಟ್ಟಡ ನಿರ್ಮಾಣ ಶಿಲೆಗಳು ಹಾಗೂ ಮರಳು ಈ ಪ್ರದೇಶದ ಮುಖ್ಯ ಶಿಲಾ ಸಂಪನ್ಮೂಲಗಳೆಂದು ಹೇಳಬಹುದು.

### ಬೆಳೆಗಳು

ಅಥಣಿ ತಾಲೂಕಿನಲ್ಲಿ ಆಹಾರ ಹಾಗೂ ವಾಣಿಜ್ಯ ಬೆಳೆಗಳೆರಡೂ ಪ್ರಮುಖ ಸ್ಥಾನ ಪಡೆದುಕೊಂಡಿವೆ. ಈ ಪ್ರದೇಶದ ಪ್ರಮುಖ ಆಹಾರ ಬೆಳೆಗಳೆಂದರೆ ಜೋಳ, ಸಜ್ಜೆ, ಮುಸುಕಿನ ಜೋಳ, ಗೋದಿ ಇತರ ಧಾನ್ಯಗಳು ಮುಖ್ಯವಾಗಿವೆ. ವಾಣಿಜ್ಯ ಬೆಳೆಗಳೆಂದರೆ ಕಬ್ಬು, ಹತ್ತಿ, ಎಣ್ಣೆ ಕಾಳುಗಳು, ಹಣ್ಣುಗಳು ಪ್ರಮುಖವಾಗಿವೆ. ಸಾಗುವಳಿಗೆ ಯೋಗ್ಯವಾದ ಬಂಜರು ಭೂಮಿ ೩೧೭೧ ಹೆಕ್ಟೇರು ಇದ್ದು ಇದನ್ನು ಅಭಿವೃದ್ಧಿ ಪಡಿಸಬೇಕಾಗಿದೆ. ನೀರಾವರಿಯನ್ನು ವಿಸ್ತರಿಸುವ ಮೂಲಕ ಕೃಷಿಯೇ ಆರ್ಥಿಕತೆಯ ಬೆನ್ನೆಲಬಾಗಿರುವ ಬಹುಜನರ ಕಲ್ಯಾಣವನ್ನು ಈ ತಾಲೂಕಿನಲ್ಲಿ ಸಾಧಿಸಬಹುದಾಗಿದೆ.

ಈ ರೀತಿಯಾದ ಭೌಗೋಳಿಕ ವೈವಿಧ್ಯತೆಯಿಂದ ಕೂಡಿರುವ ಅಥಣಿ ಪರಿಸರವು ಪ್ರಾಚೀನ ಕಾಲದಿಂದ ಮಾನವ ಸಾಂಸ್ಕೃತಿಯ ಬೆಳವಣಿಗೆಗೆ ಯೋಗ್ಯವಾದ ಪ್ರದೇಶವಾಗಿದೆ. ಇಲ್ಲಿನ ಅನೇಕ ನೆಲೆಗಳು ಚಾರಿತ್ರಿಕವಾಗಿ ಮಹತ್ವ ಪಡೆಯಲು ಭೌಗೋಳಿಕ ಅಂಶಗಳ ಪ್ರಭಾವ ಕಾರಣಿಭೂತವಾಗಿದೆ.

### ಅಥಣಿ ಪರಿಸರದ ಚಾರಿತ್ರಿಕ ಹಿನ್ನೆಲೆ

ಭವ್ಯ, ಸಾಂಸ್ಕೃತಿಕ ಹಿರಿಮೆಯನ್ನು ಹೊಂದಿರುವ ಅಥಣಿ ಪ್ರದೇಶವು ತನ್ನದೇಯಾದ ಚಾರಿತ್ರಿಕ ಹಿನ್ನೆಲೆಯನ್ನು ಹೊಂದಿದೆ.

ಪ್ರಾಗೇತಿಹಾಸಿಕ ಕಾಲದ ಮಾನವನ ನೆಲೆಗಳು ಮುಖ್ಯವಾಗಿ ಅಥಣಿ ಪ್ರದೇಶದಲ್ಲಿ ಸತ್ತಿ, ಸಪ್ತಸಾಗರ, ಮಂಗಸೂಳಿ, ಐನಾಪೂರ, ತೆಲಸಂಗ, ಐಗಳಿ, ಗುಂಡೇವಾಡಿ, ಕಾಗವಾಡ, ಬನ್ನೂರ, ಕೊಡಗಾನೂರ ಹಾಗೂ ಕೊಟ್ಟಲಗಿಗಳಲ್ಲಿ ಇವೆ. ಈ ನೆಲೆಗಳನ್ನು ಡಾ॥ ಆರ್.ಎಸ್. ಮಂಚಮುಖಿ, ಡಾ॥ ಅ.ಸುಂದರ ಹಾಗೂ ಡಾ॥ ಎಚ್.ಎಸ್. ಕಾಂಬಳೆಯವರು ಶೋಧಿಸಿದ್ದಾರೆ.

**ಸೂಕ್ಷ್ಮ ಶಿಲಾಯುಗ ಹಾಗೂ ತಾಮ್ರಶಿಲಾಯುಗ ಸಂಸ್ಕೃತಿಯ ನೆಲೆಗಳು**

೧) ಸಪ್ತಸಾಗರ : ಈ ಪರಿಸರದ ಸಪ್ತಸಾಗರ ಎಂಬ ನೆಲೆಯು ಅಥಣಿಯಿಂದ ೧೨ ಕಿ.ಮೀ. ಅಂತರದಲ್ಲಿದೆ. ಕೃಷ್ಣಾನದಿಯ ಎಡ ದಂಡೆಯಲ್ಲಿ ಪಸರಿಸಿರುವ ಈ ಗ್ರಾಮದ ಸುತ್ತಲೂ ಕಪ್ಪು ಎರೆಮಣ್ಣಿನ ಭೂಮಿಯಿದೆಯಾದರೂ, ಗ್ರಾಮದಿಂದ ಸುಮಾರು ೨ ಕಿ.ಮೀ. ಪೂರ್ವಕ್ಕೆ ಹೋದರೆ ಸುಮಾರು ೪ ಎಕರೆದಷ್ಟು ಭೂಮಿ ಹಾಳು ಮಣ್ಣಿನಿಂದ ಕೂಡಿದೆ. ಈ ಸ್ಥಳವು ಬಿಳಿವರ್ಣದ ಬೂದಿಯಂತೆ ಕಾಣುತ್ತದೆ. ಸ್ಥಳೀಯ ಐತಿಹ್ಯದ ಪ್ರಕಾರ ಈ ಸ್ಥಳದಲ್ಲಿಯೇ ಮಹಾ ಭಾರತದ ಕೊನೆಯ ಅರಸನಾದ ಜನಮೇಜಯನು ಸರ್ಪಯಜ್ಞಮಾಡಿದನೆಂದು ಉಲ್ಲೇಖವೂ ಇದೆ. ಕಿ.ಶ. ೧೯೪೪ ರಲ್ಲಿ ಆರ್.ಎಸ್. ಪಂಚಮುಖಿ ಎಂಬ ಇತಿಹಾಸ ತಜ್ಞರು ಈ ಹಾಗೂ ಮಣ್ಣಿನ ಸ್ಥಳದಲ್ಲಿ ನೂತನ ಶಿಲಾಯುಗ ಹಾಗೂ ತಾಮ್ರ ಶಿಲಾಯುಗ ಸಂಸ್ಕೃತಿಯ ಅವಶೇಷಗಳನ್ನು ಶೋಧಿಸಿದ್ದಾರೆ. ಈ ನೆಲೆಯಲ್ಲಿ ವಿಶೇಷವಾಗಿ ಸಂಗ್ರಹಿಸಿದ ಪಾತ್ರೆಗಳ ಚೂರುಗಳು, ಶಿಲೆಯ ಉಪಕರಣಗಳು ರೇಝರನಂತೆ ನುಣುಪಾದ ಚಿಕ್ಕ ಮೊನೆಗಳುಳ್ಳ ಆಯುಧೋಪಕರಣಗಳು ದೊರೆತಿವೆ. ಪ್ರಸ್ತುತ ಅಧ್ಯಯನದ ಚರಿತ್ರೆಯ ಕಾಲವನ್ನು ಸುಮಾರು ಕ್ರಿಪೂ. ೨೦೦೦ ದಿಂದ ೨೫೦೦ ರ ವರೆಗೆ ಹಿಂದಕ್ಕೆ ನೂಕಿವೆ.

೨) ಸತ್ತಿ : ಅಥಣಿ ತಾಲೂಕಿನ ದಕ್ಷಿಣ ದಿಕ್ಕಿಗೆ ಸುಮಾರು ೧೭ ಕಿ.ಮೀ. ದೂರದಲ್ಲಿ ಕೃಷ್ಣಾನದಿಯ ಎಡ ದಂಡೆಯ ಮೇಲೆ ಸತ್ತಿ ಗ್ರಾಮವಿದೆ. ಈ ಗ್ರಾಮದಿಂದ ಉತ್ತರಕ್ಕೆ ೨ ಕಿ.ಮೀ. ಅಂತರದಲ್ಲಿ ಒಂದು ಪ್ರಾಚೀನ ಜನವಸತಿ ನೆಲೆ ಕಂಡು ಬಂದಿದೆ. ಈ ನೆಲೆ ಸುಮಾರು ೮ ಎಕರೆಯಷ್ಟು ವ್ಯಾಪ್ತಿಯನ್ನು ಹೊಂದಿದೆ. ಇಲ್ಲಿ ಪ್ರಾಗೈತಿಹಾಸಿಕ ಕಾಲದ ಮಾನವ ವಿಶಿಷ್ಟಪೂರ್ಣ ಹಾಗೂ ಬೇರೆ ಬೇರೆ ವರ್ಣಗಳಿಂದ ಕೂಡಿದ ಪಾತ್ರೆಗಳ ಚೂರುಗಳು ಬೆಳಕಿಗೆ ಬಂದಿವೆ.[೩] ಕುತೂಹಲದ ಸಂಗತಿ ಎಂದರೆ ಅಲ್ಲಿಯ ಕೆಲವು ಮಡಕೆಯ ಚೂರುಗಳ ಮೇಲೆ ಮೀನು ಹಿಡಿಯುತ್ತಿರುವ ಕೊಕ್ಕರೆಯ ಚಿತ್ರವಿದೆ. (ಅನುಬಂಧದಲ್ಲಿ ಚಿತ್ರ ಕಾಣಬಹುದು)

೩) ಮಂಗಸೂಳಿ : ಮಂಗಸೂಳಿ ಈ ಗ್ರಾಮವು ಅಥಣಿಯಿಂದ ಪಶ್ಚಿಮಕ್ಕೆ ಸುಮಾರು ೧೮ ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಆಗ್ನೇಯಕ್ಕೆ ೧ ಕಿ.ಮೀ. ಅಂತರದಲ್ಲಿ ಒಂದು ಪ್ರಾಚೀನ ಜನವಸತಿ ನೆಲೆ ಇದೆ. ಈ ನೆಲೆಯು ಸುಮಾರು ೫ ಹೆಕ್ಟೇರದಷ್ಟು ವಿಸ್ತಾರಗೊಂಡಿದೆ. ಅಲ್ಲಿ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ಉಪಕರಣಗಳು ಸಿಕ್ಕಿವೆ. ಈ ನೆಲೆಯು ಸಮತಟ್ಟಾಗಿದ್ದು ಅಲ್ಲಿ ಕೇವಲ ಒಂದೆರೆಡು ಮರಗಳು ಮಾತ್ರ ಈಗ ಬೆಳೆದಿವೆ.

ಈ ಸ್ಥಳದಲ್ಲಿ ವಿವಿಧ ಬಣ್ಣಗಳಿಂದ ಲೇಪನಗೊಂಡ ಪ್ರಾಗೈತಿ ಹಾಸಿಕ ಪಾತ್ರೆಗಳಾದ ಕೆಂಪು ಹಾಗೂ ಕಂದು ಬಣ್ಣದ ಮಡಕೆಯ ಚೂರುಗಳು, ಗೋದಿ ಬಣ್ಣದ ಮಡಕೆಯ ಚೂರುಗಳು ಸಿಕ್ಕಿವೆ. ಪಾತ್ರೆಗಳ ಮೇಲೆ ಗೋದಿ ವರ್ಣದ ರೇಖೆಗಳಿವೆ. ಇವು ಮಸ್ಕಿ ಹಾಗೂ ಗೋದಾವರಿ ನದಿ ಕೊಳ್ಳದಲ್ಲಿ ದೊರೆತ ಪಾತ್ರೆಗಳನ್ನು ಹೋಲುತ್ತವೆ. ಇಂತಹ ಮಡಕೇಯ ಚೂರುಗಳನ್ನು ಎಚ್.ಎಸ್. ಕಾಂಬಳೆಯವರು ಕೊಡಗಾನೂರು ಎಂಬ ಗ್ರಾಮದಲ್ಲಿ ಸಂಶೋಧಿಸಿದ್ದಾರೆ.

**ಕಬ್ಬಿಣದ ಬೃಹತ್ ಶಿಲಾಯುಗ ಸಂಸ್ಕೃತಿ**

ಈ ಪ್ರದೇಶದ ಬೃಹತ್ ಶಿಲಾಯುಗ ಸಂಸ್ಕೃತಿಗೆ ಸೇರಿದ ನೆಲೆಗಳಾದ ಐನಾಪೂರ, ಐಗಳಿ, ಮಂಗಸೂಳಿ, ಕೊಡಗಾನೂರ, ಬನ್ನೂರ, ತೆಲಸಂಗ ಹಾಗೂ ಕೊಟ್ಟಲಗಿಯ ನೆಲೆಗಳನ್ನು ಎಚ್.ಎಸ್. ಕಾಂಬಳೆಯವರು ಅನ್ವೇಷಣೆ ಮಾಡಿದ್ದಾರೆ.

ಈ ಪ್ರದೇಶವನ್ನು ಚರಿತ್ರೆಯ ಕಾಲದ ಅಧ್ಯಯನಕ್ಕೆ ಒಳಪಡಿಸಿದಾಗ ಕ್ರಿ.ಶ. ೧ನೇಯ ಶತಮಾನದಿಂದ ಕಲ್ಯಾಣಿ ಚಾಲುಕ್ಯರ ಆಡಳಿತದ ವರೆಗೆ ಯಾವದೇ ಕುರುಹುಗಳು ಲಭ್ಯವಾಗುವದಿಲ್ಲ. ಕಲ್ಯಾಣಿ ಚಾಲುಕ್ಯರ ಶಾಸನಗಳಲ್ಲಿ ಈ ಪ್ರದೇಶವು ೧) ಕರ್ಹಡ ನಾಲ್ಸಾಸಿರ ೨) ಮಿರಿಂಜೆ ಮೂರಸಾಸಿರ ೩) ತುಂಗಳ ೪) ತುಂಗಳ ಪನ್ನೆರಡು. ೫) ಕೊರ್ಗ್ಗಟನೂರು ೬) ಜನ್ನವಾಡ ೭) ನಾಗರಾಳ ೮) ಬಾಡಗೆ ೯) ಎಡೆಯೂರು ೧೦) ಜಂಜಲವಾಡ ೧೧) ಕಲ್ಯಾಣ.

ಅಥಣಿ ಪ್ರದೇಶದ ಚಾರಿತ್ರಿಕ ಕಾಲದ ಇತಿಹಾಸಕ್ಕೆ ಸಂಬಂಧಿಸಿದ ನೆಲೆಗಳನ್ನು ಶಾಸನಗಳು ಹಾಗೂ ಸ್ಮಾರಕಗಳ ಆಧಾರಗಳಿಂದ ಪತ್ತೆ ಹಚ್ಚಲಾಗಿದೆ. ಕಲ್ಯಾಣಿ ಚಾಲುಕ್ಯರ ಕಾಲದ ಅಥಣಿಯನ್ನು ಪ್ರಮುಖ ಸಾಂಸ್ಕೃತಿಕ ಕೇಂದ್ರವಾಗಿಟ್ಟುಕೊಂಡು ಈ ಮೇಲಿನ ಸ್ಥಳಗಳ ಪ್ರಸ್ತುತತೆಯನ್ನು ಅಧ್ಯಯನ ಮಾಡಲಾಗಿದೆ.

೧) ಕರ್ಹಡ ನಲ್ಸಾಸಿರವು ಚಾಲುಕ್ಯ ಕಾಲದಲ್ಲಿ ೪ ಸಾವಿರ ಗ್ರಾಮಗಳನ್ನು ಹೊಂದಿದ್ದು ದೊಡ್ಡ ಆಡಳಿತದ ವಿಭಾಗವಾಗಿತ್ತು. ಅದರ ಮುಖ್ಯ ಪಟ್ಟಣ ಕರಹಡ ಅಥವಾ ಇಗಿನ ಕರ್ಹಾಡ ಇದು ದಕ್ಷಿಣ ಮಹಾರಾಷ್ಟ್ರದ ಸತಾರೆ ಜಿಲ್ಲೆಯ ಒಂದು ತಾಲೂಕು ಪ್ರದೇಶವಾಗಿದ್ದು ಕೋಲ್ಹಾಪೂರದಿಂದ ಉತ್ತರಕ್ಕೆ ಸುಮಾರು ೨೭ ಮೈಲಿ ದೂರದಲ್ಲಿದೆ.[೪]

೨) ಮಿರಿಂಜೆ ಮಾಸಾಸಿರ, ಇದು ಚಾಲುಕ್ಯರ ಆಳ್ವಿಕೆಯ ಮತ್ತೊಂದು ಆಡಳಿತದ ವಿಭಾಗವಾಗಿದ್ದು ಇಗೀನ ಮಿರಜ ಪಟ್ಟಣ ತಾಲೂಕು ಪ್ರದೇಶವಾಗಿದ್ದು, ಮಹಾರಾಷ್ಟ್ರದ ಸಾಂಗ್ಲಿ ಜಿಲ್ಲೆಯಲ್ಲಿದೆ.[೫]

೩) ತುಂಗುಳು : ಈಗೀನ ತುಂಗಳ ಗ್ರಾಮ ಬಾಗಲಕೋಟ ಜಿಲ್ಲೆಯ ಜಮಖಂಡಿ ತಾಲೂಕಿನಲ್ಲಿದೆ.

೪) ತುಂಗುಳ ಪನ್ನೆರಡು : ತುಂಗಳ ಗ್ರಾಮ ಮುಖ್ಯವಾಗಿ ೧೨ ಹಳ್ಳಿಗಳ ಆಡಳಿತದ ಒಂದು ಚಿಕ್ಕ ವಿಭಾಗ.

೫) ಕೊರ್ಗ್ಗನೂರು : ಈಗೀನ ಕೊಕಟನೂರು ಅಂದು ಇದೊಂದು ಪ್ರಮುಖ ಅಗ್ರಹಾರವಾಗಿತ್ತು.

೬) ಜನ್ನವಾಡವು ತುಂಗಳ ಪನ್ನೆರಡಕ್ಕೆ ಒಳಗಾಗಿದ್ದ ಒಂದು ಗ್ರಾಮ.

೭) ನಾಗರಾಳ ಮತ್ತು

೮) ಯಡಯೂರು ಗ್ರಾಮಗಳು ಇಂದು ಅಳಿದು ಹೋಗಿವೆ.

೯) ಬಾಡಿಗೆ. ಈಗೀನ ಬಾಡಿಗೆಯಾಗಿದೆ.ಇದು ತುಂಗಳದಿಂದ ವಾಯವ್ಯಕ್ಕೆ ೩ ಮೈಲುಗಳ ಅಂತರದಲ್ಲಿದೆ.

೧೦) ಜಂಜಲವಾಡ ಈಗೀನ ಜುಂಜರವಾಡವಾಗಿದ್ದು ಕೃಷ್ಣಾನದಿಯ ಉತ್ತರ ದಡದ ಒಂದು

ಗ್ರಾಮವಾಗಿದೆ.

೧೧) ಕಲ್ಯಾಣ, ಇದು ಕಲ್ಯಾಣಿ ಚಾಲುಕ್ಯರ ರಾಜಧಾನ ಪಟ್ಟಣವಾಗಿದ್ದು. ಈಗೀನ ಬಿದರ ಜಿಲ್ಲೆಯಲ್ಲಿರುವ ಬಸವ ಕಲ್ಯಾಣವೆಂಬ ತಾಲೂಕು ಸ್ಥಳ. ಡಾ॥ ಫ್ಲಿಡ್ ರವರ ಪ್ರಕಾರ ಕೆಂಭಾವಿ ಸಿದ್ಧೇಶ್ವರ ದೇಗುಲದಲ್ಲಿ ದೊರೆತ ಕ್ರಿಶ. ೧೦೫೪ ರ ಶಾಸನ ಈ ವಿಷಯವನ್ನು ವಿವರಿಸುವ ಪ್ರಥಮ ಶಾಸನವೆಂದು ತಿಳಿಸಿದ್ದಾರೆ.

ಅಥಣಿ ಪ್ರದೇಶದಲ್ಲಿರುವ ಕೆಲವು ಗ್ರಾಮಗಳಲ್ಲಿ ಇದುವರೆಗೆ ನಡೆಸಿದ ಸಂಶೋಧನೆಯ ಫಲವಾಗಿ ಕೆಲವು ಚಾರಿತ್ರಿಕ ಮಹತ್ವವುಳ್ಳ ಬಹುಮೂಲ್ಯ ಸಂಗತಿಗಳು ಬೆಳಕಿಗೆ ಬಂದಿವೆ. ವಿದ್ವಾಂಸರಿಂದ ಸಂಶೋಧನೆಗೆ ಒಳಪಟ್ಟ ಗ್ರಾಮಗಳೆಂದರೆ

೧) ಅಥಣಿ ೨) ಕೊಕಟನೂರ ೩) ಕೊಟ್ಟಲಗಿ ೪) ಬಳ್ಳಿಗೇರಿ ಕಕಮರಿ

೫) ತೆಲಸಂಗ ರಾಮತೀರ್ಥ ೬) ಸಪ್ತಸಾಗರ ೭) ಐನಾಪೂರ ೮) ಮದಭಾವಿ

ಅಥಣಿ

ಕರಹಾಡ ನಾಲ್ಕು ಸಾವಿರ ಹಳ್ಳಿಗಳ ಭೂಭಾಗದ ಕಲ್ಯಾಣದ ಚಾಲುಕ್ಯರ ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ಕ್ರಿಶ. ೧೦೩೦ ರಲ್ಲಿ ಅಥಣಿ ಅವನ ಪ್ರದೇಶವಾಗಿತ್ತು. ಅಥಣಿಯ ಚಾರಿತ್ರಿಕ ಬೆಳವಣಿಗೆಯ ಕುರಿತು ವಿವಿಧ ಮೌಖಿಕ ಹಾಗೂ ಲಿಖಿತ ಅಭಿಪ್ರಾಯಗಳು ಈ ರೀತಿಯಾಗಿವೆ.

ಅಥಣಿ ಇದರ ರೂಪ ನಿಷ್ಪತ್ತಿ ಬಗ್ಗೆ ವಾದ ಪ್ರತಿಪಾದಗಳಿವೆ. ಅಥಣಿ ಇದು ಅಥಣಿ ಎಂಬ ಅಪಭ್ರಂಶದಿಂದ ಉಂಟಾಗಿದೆ ಎಂದು ಹೇಳಿದ್ದಾರೆ. ಇದರ ಅರ್ಥ ಯಜಮಾನನಿಲ್ಲದ ಊರು.

ಈ ಪಟ್ಟಣದ ಪೂರ್ವದಿಕ್ಕಿನಲ್ಲಿರುವ 'ಕರಿಮಸೂತಿ' ಷಾಹಿ ಹಾಗೂ ಮರಾಠರ ಗಡಿ ಸೀಮೆಯಾಗಿತ್ತು. ಅಥಣಿಯಲ್ಲಿ ಆನೆಗಳನ್ನು (ಮರಾಠಿ ಶಬ್ದ ಹಾಥಿ) ನಿಲ್ಲಿಸುತ್ತಿದ್ದರು. ಈ ಹಾಥಿ ಎಂಬ ಶಬ್ದವು ಅಪಭ್ರಂಶವಾಗಿ ಹತ್ತಿ , ಹತಿಣಿ, ಅಥಣಿ ಎಂದಾಗಿರಬಹುದೆಂಬ ಅಭಿಪ್ರಾಯವೂ ಒಂದು ಇದೆ.

ಸಂಸ್ಕೃತದಲ್ಲಿ ಅಥ ಎಂದರೆ ಪ್ರಾರಂಭ, ಣಿ-ನಿರಂಜನ ಎಂದಾಗುತ್ತದೆ. ಅಂದರೆ ಈ ನೆಲದಲ್ಲಿ ನಿರಂಜನರು ಯಾವಾಗಲೂ ನೆಲೆಸಿರುತ್ತಾರೆ ಎಂದು ಅರ್ಥ.

ಮರಾಠರ ನಾಯಕ ಶಿವಾಜಿಯ ಆಳ್ವಿಕೆಯಲ್ಲಿ ಅಥಣಿ ಆತನ ಚಟುವಟಿಕೆಯ ಕೇಂದ್ರವಾಗಿತ್ತು. ನಿಪ್ಪಾಣಿ, ರಾಸ್ತೆ, ಮಂಗಸೂಳಿ ವಾಡೆಗಳನ್ನು ನೋಡಿದಾಗ ಇಲ್ಲಿ ಯಾವುದೋ ಒಬ್ಬ ಧನಿ ಇದ್ದಂತೆ ಕಂಡುಬರುವದಿಲ್ಲ. ಆದ್ದರಿಂದ ಈ ಊರಿಗೆ ಅಧನಿ ನಂತರ ಅಥಣಿ ಎಂದು ಕರೆದಿರಬಹುದು.

ಕರ್ನಾಟಕ ಹಾಗೂ ಮಹಾರಾಷ್ಟ್ರದ ಗಡಿ ಪ್ರದೇಶವಾದ ಅಥಣಿ ಪಟ್ಟಣವನ್ನು ೧೬೩೯ ರಲ್ಲಿ ಜರ್ಮನ್ ಪ್ರವಾಸಿಗ ಮೆಂಡಲ್‌ಸ್ಲೂ ಭೇಟಿ ನೀಡಿದ್ದು ಇದನ್ನು "ಅಟ್ಟನಿ" ಎಂದು ಕರೆದಿದ್ದಾನೆ.

೧೬೭೫ ರಲ್ಲಿ ಆಂಗ್ಲ ಪ್ರವಾಸಿಗ ಫ್ಲೇಯರ್ ಎಂಬಾತ ಇದಕ್ಕೆ "ಹಟ್ಟೆನಿ" ಎಂದು ಕರೆದಿದ್ದಾನೆ.

ಮೆಂಡಲ್‌ಸ್ಲೊ ಅಥಣಿ ಕುರಿತು ವಿವರಿಸುತ್ತಾ ಇದು ವಿಜಾಪೂರ ಮತ್ತು ಗೋವಾದ ಪ್ರಮುಖ ವ್ಯಾಪಾರಿ ಕೇಂದ್ರವೆಂದು ವರ್ಣಿಸಿದ್ದಾನೆ.

೧೬೭೫ ರಲ್ಲಿ ಪ್ಲೆಯರ್ ಇದನ್ನು ವಿಜಾಪೂರ ಆದಿಲ್ ಷಾಹಿ ರಾಜ್ಯದ ಪ್ರಮುಖ ಪಟ್ಟಣ ಎಂದು ಬರೆದಿರುತ್ತಾನೆ. ೧೬೭೯ ರಲ್ಲಿ ಹತ್ತಿನಿಯು ಮೊಗಲ್ ಸುಭೆದಾರ ದಿಲೇರಖಾನನಿಂದ ಶಿವಾಜಿಗೆ ಹಸ್ತಾಂತರವಾಯಿತು. ಇದೇ ಕಾಲಕ್ಕೆ ಕಾರವಾರದ ಕಾರಖಾನೆಗೆ ಈ ಪಟ್ಟಣದಿಂದ ಕಚ್ಚಾವಸ್ತು ಪೂರೈಸಲ್ಪಡುತ್ತಿತ್ತು. ದಿಲೇರಖಾನನಿಂದ ಇಲ್ಲೊಂದು ಕೋಟೆ ನಿರ್ಮಾಣವಾಗಿತ್ತು ಎಂದಿದ್ದಾನೆ.

೧೭೨೦ ರಲ್ಲಿ ಅಥಣಿಯು ಮರಾಠರಿಂದ ನಿಜಾಮ್-ಎ-ಮೂಲ್ಕ ಈತನಗೆ ಹಸ್ತಾಂತರವಾಯಿತು. ಇದು ಮತ್ತೆ ೧೭೫೦ ರಲ್ಲಿ ಸಾತಾರಾದ ಶಾಹು ಮಹಾರಾಜರಿಗೆ ಹಸ್ತಾಂತರ ಗೊಂಡಿತು.

೧೭೮೮ ರಲ್ಲಿ ರಿನೇಲ್ ಇದನ್ನು ಅಟೋನಿ ಎಂದು ಕರೆದ. ೧೭೯೨ ರಲ್ಲಿ ಕ್ಯಾಪ್ಟನ್ ಮೂರ್ ಈತ ಅಟ್ನಿ ಇದು ದೊಡ್ಡದಾದ ಪಟ್ಟಣವಾಗಿದ್ದು ಸೂರತ್, ಮುಂಬಯಿ, ರಾಯಚೂರ, ನಾರಾಯಣಪೂರ, ನಿಜಾಮ ರಾಜ್ಯ ಇವುಗಳೊಂದಿಗೆ ಬೃಹತ್ ವ್ಯಾಪಾರ ಸಂಬಂಧ ಹೊಂದಿತ್ತು ಎಂದು ವಿವರಿಸಿದ್ದಾನೆ.

೧೪೫೦ ರಲ್ಲಿ ಸಿದ್ಧೇಶ್ವರ ಮಂದಿರ ಹಾಗೂ ಅಮೃತಲಿಂಗೇಶ್ವರ ಮಂದಿರಗಳು ಇಲ್ಲಿ ಸ್ಥಾಪನೆಯಾಗಿದ್ದವು. ಅಲ್ಲದೇ ನರಸಿಂಹ, ಗಣಪತಿ, ವೆಂಕಟೇಶ ಮೊದಲಾದ ಮಂದಿರಗಳಿದ್ದವು ಎಂಬುದಕ್ಕೆ ಕುರುಹುಗಳಿವೆ. ಇವುಗಳಲ್ಲಿ ಅಮೃತ ಲಿಂಗೇಶ್ವರ ಮಂದಿರ ಅತೀ ಪ್ರಾಚೀನ ದೇವಾಲಯವಾಗಿದ್ದು ಚಾಲುಕ್ಯ ಶೈಲಿಯಲ್ಲಿದೆ. ಕಲಾತ್ಮಕ ಸ್ಥಂಭಗಳೊಂದಿಗೆ ನವರಂಗ ಗರ್ಭಗ್ರಹ, ಮುಖ ಮಂಟಪ ಇದೆ.

ಬಿಜಾಪೂರ ರಸ್ತೆಯಲ್ಲಿ ಸಿದ್ಧೇಶ್ವರ ಮಂದಿರವಿದ್ದು ಆದಿಲ್‌ಶಾಹಿ ಕಾಲದ ನಿರ್ಮಾಣವಾಗಿದೆ. ದೇವಾಲಯದ ಗೋಡೆಗಳು ಚಾಲುಕ್ಯ ಮಾದರಿಯಲ್ಲಿವೆ. ಕಾರ್ತೀಕ ಮಾಸದಲ್ಲಿ ಶಿದ್ಧೇಶ್ವರ ದೇವರ ಜಾತ್ರೆ ನಡೆಯುವುದು. ಇಲ್ಲಿ ಒಟ್ಟು ೧೦ ಮಸೀದೆಗಳಿವೆ. ೧೦೦ ಭಾವಿಗಳಿವೆ. ಇವುಗಳಲ್ಲಿ ೩೭ ಹೊಕ್ಕು ತುಂಬುವ ಭಾವಿಗಳು ಹಾಗೂ ೬೩ ಸೇದುವ ಭಾವಿಗಳಿವೆ. ಈ ಪಟ್ಟಣದ ಇನ್ನೊಂದು ವೈಶಿಷ್ಟ್ಯವೆಂದರೆ ಇಲ್ಲಿಯ ಹಾಗೂ ಮಹಾರಾಷ್ಟ್ರದ ಪ್ರಮುಖ ಪಟ್ಟಣವಾದ ಪುಣೆಯ ನಗರ ಸಭೆಗಳು ೧೮೫೩ ರಲ್ಲಿ ಏಕಕಾಲದಲ್ಲಿ ಸ್ಥಾಪಿಸಲ್ಪಟ್ಟಿವೆ. ಇತ್ತೀಚಿಗೆ ಇಲ್ಲಿನ ನಗರ ಸಭೆಯು ಶತಮಾನೋತ್ಸವವನ್ನು ಆಚರಿಸಿಕೊಂಡಿದೆ.

ಅಥಣಿ ತಾಲೂಕಿಗೆ ಸಂಬಂಧಿಸಿದಂತೆ ತೆಲಸಂಗದಲ್ಲಿಯ ವೆಂಕಟರಮಣ ದೇವಾಲಯ ಚಾರಿತ್ರಿಕ ಮಹತ್ವದ ದೇವಾಲಯವಾಗಿದೆ. ನಂದೇಶ್ವರ ಗ್ರಾಮದಲ್ಲಿಯ ಜೈನ ಬಸದಿಗಳು, ಜೈನ ಸಂಸ್ಕೃತಿಯ ಪ್ರತಿಬಿಂಬಗಳಾಗಿವೆ.

ಕೊಕಟನೂರಿನ ಶಾಸನಗಳು ಉಲ್ಲೇಖಿಸುವಂತೆ ಅಲ್ಲಿರುವ ಪಾಪನಾಶಿ, ಸಿದ್ಧರಾಮೇಶ್ವರ,

ಕಾಡಸಿದ್ಧೇಶ್ವರ, ಅಮೃತ ಲಿಂಗೇಶ್ವರ, ವೀರಭದ್ರ ಮಲ್ಲಿಕಾರ್ಜುನ ದೇವಾಲಯುಗಳು ಉಲ್ಲೇಖನಿಯವಾಗಿವೆ.[೭] ಇವುಗಳಲ್ಲಿ ಪಾಪನಾಶಿ ಸ್ಥಳೀಯರಿಂದ ಕಲ್ಮೇಶ್ವರ ಎಂದು ಕರೆಯಲ್ಪಡುತ್ತಿದ್ದು ಇದೊಂದು ತ್ರಿಕೂಟಾಚಲ ಮಾದರಿಯ ದೇವಾಲಯವಾಗಿದೆ.

ಕೊಟ್ಟಲಗಿಯಲ್ಲಿ ಅಗ್ರಹಾರವಿದ್ದ ಬಗ್ಗೆ ಶಾಸನೀಯ ಆಧಾರಗಳು ಲಭ್ಯವಾಗಿವೆ. ಇಲ್ಲಿನ ಪ್ರಸಿದ್ಧ ಸಿದ್ಧೇಶ್ವರ ದೇವಾಲಯ ಉತ್ತರ ಕಲ್ಯಾಣ ಚಾಲುಕ್ಯ ಶೈಲಿಯಲ್ಲಿ ನಿರ್ಮಾಣಗೊಂಡ ದೇವಾಲಯವಾಗಿದ್ದು ಗರ್ಭಗ್ರಹ, ಅರ್ಧಮಂಟಪ, ನವರಂಗ ಹಾಗೂ ಮುಖಮಂಟಪ ಹೊಂದಿದೆ. ದೇವಾಲಯದ ಹೊರಗೋಡೆಯ ಮೇಲೆ ಸಪ್ತ ಮಾತ್ರಕೆಯರು, ವಿಷ್ಣು ಹಾಗೂ ಇತರ ದೇವತೆಗಳನ್ನು ಕೆತ್ತಲಾಗಿದೆ.

ಕಕಮರಿ ಅಥಣಿ ತಾಲೂಕಿನ ಒಂದು ಪ್ರಾಚೀನ ಗ್ರಾಮ. ಕಕಮರಿ ಅಪ್ರಕಟಿತ ಶಾಸನದಿಂದ ತಿಳಿದು ಬಂದಿದೆ.

### ರಾಮತೀರ್ಥ

ಅಥಣಿ ತಾಲೂಕಿನ ರಾಮತೀರ್ಥ ಗ್ರಾಮ ಒಂದು ತೀರ್ಥಕ್ಷೇತ್ರವಾಗಿದ್ದು ಸುಪ್ರಸಿದ್ಧ ರಾಮೇಶ್ವರ ದೇವಾಲಯವಿದೆ. ಇದು ಕಲ್ಯಾಣಿ ಚಾಲುಕ್ಯ ಶೈಲಿಯನ್ನು ಹೊಂದಿದ್ದು ಎರಡು ಶಾಸನಗಳು ಇಲ್ಲಿ ದೊರಕಿವೆ. ಇವು ಕಲಚೂರಿ ಅರಸ ಬಿಜ್ಜಳ ಮತ್ತು ಆರನೇ ವಿಕ್ರಮಾದಿತ್ಯನು ದಾನದತ್ತಿ ಕೊಟ್ಟಬಗ್ಗೆ ವಿವರಣೆ ನೀಡುತ್ತವೆ.[೮] ಅಲ್ಲದೆ ಈ ಕ್ಷೇತ್ರವನ್ನು ದಕ್ಷಿಣ ಕಾಶಿ ಎಂದು ಉಲ್ಲೇಖಿಸಿವೆ. ದೇವಾಲಯದ ಪ್ರಾಂಗಣದಲ್ಲಿರುವ ಬ್ರಹತ್ ದೀಪಸ್ತಂಭ ವಾಸ್ತುಶಿಲ್ಪದಲ್ಲಿ ಎಲ್ಲರ ಗಮನ ಸೆಳೆಯುತ್ತದೆ.

### ಸಪ್ತಸಾಗರ

ಕೃಷ್ಣಾನದಿಯ ಎಡದಂಡೆಯ ಮೇಲಿರುವ ಈ ಸ್ಥಳದಲ್ಲಿ ಜನಮೇಜಯ ಹಾಗೂ ಸಪ್ತಋಷಿಗಳು ಯಜ್ಞಮಾಡಿರುತ್ತಾರೆ ಎಂಬುದಾಗಿ ಐತಿಹ್ಯವಿದೆ. ಇಲ್ಲಿ ಶಿವ ದೇಗುಲ ಹಾಗೂ ಜೈನ ಬಸದಿಗಳೂ ಇವೆ. ಮುಖ್ಯವಾಗಿ ಸಪ್ತಸಾಗರ, ಸತ್ತಿ ಹಾಗೂ ಸವದಿಗಳಲ್ಲಿ ಇತಿಹಾಸ ಪೂರ್ವಕಾಲದ ನೆಲೆಗಳು ದೊರೆತಿವೆ.

### ನಂದಗಾಂವ

ಅಥಣಿ ತಾಲೂಕಿನ ಐತಿಹಾಸಿಕ ಗ್ರಾಮವಾದ ನಂದಗಾಂವ ದಲ್ಲಿ ಬ್ರಹ್ಮದೇವಾಲಯ, ಬಸವಣ್ಣ ದೇವಾಲಯ, (ಚಿತ್ರ ಸಂ.೧೧-೧೬) ಹಾಗೂ ಸದಾಶಿವ ಮಠ, ಜೈನ ಬಸದಿ ಹಾಗೂ ಶಮಸುದ್ದೀನ ದರ್ಗಾಗಳು ಉಲ್ಲೇಖನೀಯವಾಗಿವೆ. ಮಹಿಷವಾಡಗಿ ಗ್ರಾಮದಲ್ಲಿ ಜೈನ ಬಸದಿ ಇದ್ದು ಇಲ್ಲಿ ಮಹಾವೀರನ ಮೂರ್ತಿ ಶಿಲ್ಪವನ್ನು ಕಾಣಬಹುದು. (ಚಿತ್ರ ನಂ.೧೭)

### ಬಳ್ಳಿಗೇರಿ

ಅಥಣಿ ತಾಲೂಕಿನ ಬಳ್ಳಿಗೇರಿ ಗ್ರಾಮವು ಚಾಲುಕ್ಯ ವಾಸ್ತುಶಿಲ್ಪ ಶೈಲಿಯ ಬಸವಣ್ಣ ದೇವಾಲಯವನ್ನು ಹೊಂದಿದೆ. ಈ ದೇವಾಲಯ ತ್ರಿಕೂಟಾಚಲ ಮಾದರಿಯದಾಗಿದ್ದು ಸುಂದರವಾದ ವಾಸ್ತುಶಿಲ್ಪ ವೈಭವವನ್ನು ಹೊಂದಿದೆ.

## ಕಾಗವಾಡ

ಅಥಣಿ ತಾಲೂಕಿನ ಮಹಾರಾಷ್ಟ್ರದ ಗಡಿಯಲ್ಲಿರುವ ಕಾಗವಾಡ ಗ್ರಾಮವು ಚಾರಿತ್ರಿಕ ಮಹತ್ವವುಳ್ಳ ಸ್ಥಳವಾಗಿದೆ. ಕಾಗವಾಡ ಎಂಬ ಹೆಸರು ಜೈನ ದೇವತೆಗೆ ಸಂಬಂಧಿಸಿದ್ದಾಗಿದ್ದು, ಇಲ್ಲಿರುವ ಸಂತೂಬಾಯಿ, ಜೈನ ಬಸದಿಗಳು ಪ್ರಮುಖವಾಗಿವೆ.

## ಶೇಡಬಾಳ

ಅಥಣಿ ತಾಲೂಕಿನ ಚಿಕ್ಕ ಗ್ರಾಮವಾದ ಶೇಡಬಾಳದಲ್ಲಿ ಬಸವಣ್ಣ [ಚಿತ್ರ ನಂ.೧೦] ದೇವಾಲಯವಿದ್ದು ಇದು ನಂತರದ ವಿಜಯನಗರ ಶೈಲಿಯಲ್ಲಿ ನಿರ್ಮಾಣವಾಗಿದೆ. ಇಲ್ಲಿರುವ ಮಲ್ಲಿಕಾರ್ಜುನ ದೇವಾಲಯ [ಚಿತ್ರ ನಂ.೯] ಮಹಾವೀರ, ಶಾಂತಿನಾಥ ಹಾಗೂ ಆದಿನಾಥ ಬಸದಿಗಳು [ಚಿತ್ರ ನಂ.೧೪] ಕೂಡ ಅತ್ಯಂತ ಸುಂದರವಾಗಿವೆ. ಶೇಡಬಾಳದಲ್ಲಿ ಶಾಂತಿನಾಥ ಆಶ್ರಮವಿದೆ. 'ಪೀರಲಾಲಾ ಮಿಶಾಖ್' ಹೆಸರಿನ ದರ್ಗಾ ಕೂಡ ಇದೆ.

## ಉಗಾರ ಬುದ್ರುಕ್

ದಲ್ಲಿರುವ ಪದ್ಮಾವತಿ ದೇವಾಲಯವು ಒಂದು ಪ್ರಾಚೀನ ದೇವಾಲಯವಾಗಿದ್ದು, ಈ ದೇವಾಲಯದಲ್ಲಿರುವ ಪದ್ಮಾದೇವಿಯ ಪಂಚ ಲೋಹದ ವಿಗ್ರಹವು ಸುಮಾರು ೫೦೦ ವರ್ಷಗಳಷ್ಟು ಪ್ರಾಚೀನದಾಗಿದೆ. ಇಲ್ಲಿ ನೇಮಿನಾಥ ಮತ್ತು ಆದಿನಾಥ ಎಂಬ ಬಸದಿಗಳಿವೆ.

## ಐನಾಪೂರ

ಅಥಣಿ ತಾಲೂಕಿನಲ್ಲಿರುವ ಕೃಷ್ಣಾನದಿಯ ದಂಡೆಯ ಮೇಲಿರುವ ಐನಾಪೂರ ಚಾರಿತ್ರಿಕ ಹಿನ್ನೆಲೆಯುಳ್ಳ ಗ್ರಾಮವಾಗಿದೆ. ಪ್ರಾಗೈತಿಹಾಸಿಕ ಕಾಲದ ಸೂಕ್ಷ್ಮ ಶಿಲಾಯುಗದ ನೆಲೆಗಳು ಇಲ್ಲಿ ಕಂಡುಬಂದಿವೆ. ಅಲ್ಲದೆ ಶ್ರೀ ಸಿದ್ಧೇಶ್ವರ ಗ್ರಾಮದ ದೇವತೆಯಾಗಿದ್ದು ಸುಂದರವಾದ ಪ್ರಾಚೀನ ದೇವಾಲಯವಿದೆ. ವಿಶ್ವನಾಥ ಹಾಗೂ ವೆಂಕಟರಮಣ ಮುಂತಾದ ದೇವಾಲಯಗಳ ಜೊತೆಗೆ ಪಾರ್ಶ್ವನಾಥ ಬಸದಿ ಮತ್ತು ಸೈಯದ್ ಉಮ್ಮೇಶ ಖಾದ್ರಿಯ ದರ್ಗಾ ಇವೆ.

## ಮಂಗಸೂಳಿ

ಇದೊಂದು ಕಲ್ಯಾಣಿ ಚಾಲುಕ್ಯರ ಕಾಲದ ಪ್ರಸಿದ್ಧ ಕ್ಷೇತ್ರವಾಗಿದೆ. ಇಲ್ಲಿರುವ ಮಲ್ಲಯ್ಯ ದೇವಾಲಯ ಉತ್ತರ ಚಾಲುಕ್ಯ ಶೈಲಿಯದಾಗಿದೆ. ಇಲ್ಲಿಯೂ ದರ್ಗಾ ಮತ್ತು ಜೈನ ಬಸದಿಗಳಿವೆ.

## ಮದಭಾವಿ

ಅಥಣಿ ಪರಿಸರದಲ್ಲಿರುವ ಈ ಗ್ರಾಮ ಮಹಾರಾಷ್ಟ್ರದ ಗಡಿ ಪ್ರದೇಶದಲ್ಲಿದ್ದು ಕಲ್ಯಾಣಿ ಚಾಲುಕ್ಯರ

ಉತ್ತರ ಭಾಗಕ್ಕೆ ಸಂಬಂಧ ಪಟ್ಟದ್ದಾಗಿದೆ. ಮದಭಾವಿಗೆ ಅಂದು ಮಧುಭಾವಿ ಎಂದು ಕರೆಯಲಾಗುತ್ತಿದ್ದು ಇಲ್ಲಿ ಮಧುಕೇಶ್ವರ ಮತ್ತು ಶ್ರೀ ಸಿದ್ಧೇಶ್ವರ, ಬೀರಪ್ಪ, ಹನುಮಾನ ಮತ್ತು ರಾಮಲಿಂಗ ಮುಂತಾದ ದೇವಾಲಯಗಳು ಇಲ್ಲಿವೆ. ರಾಮಲಿಂಗ ದೇವಾಲಯವು ಉತ್ತರ ಚಾಲುಕ್ಯ ಶೈಲಿಯದಾಗಿದ್ದು ಗರ್ಭಗ್ರಹ, ನವರಂಗ ಹಾಗೂ ಮುಖಮಂಟಪಗಳನ್ನು ಹೊಂದಿದೆ. ಇಲ್ಲಿರುವ ಮಹಾದೇವ ದೇವಾಲಯ ದ್ವಿಕೂಟಾಚಲ ಮಾದರಿಯ ದೇವಾಲಯವಾಗಿದೆ.

ಅಥಣಿ ಸಾಂಸ್ಕೃತಿಕ ಚರಿತ್ರೆ ಅಧ್ಯಯನದಲ್ಲಿ ಇನ್ನೂ ಅನೇಕ ಸ್ಥಳಗಳು ಅಧ್ಯಯನದ ವ್ಯಾಪ್ತಿಗೆ ಬರದೇ ಇರಬಹುದು. ಕಾರಣ ಆ ನಿಟ್ಟಿನಲ್ಲಿ ಇನ್ನೂ ಸಂಶೋಧನೆ ಆಗಬೇಕಾಗಿದೆ. ಮುಂದಿನ ಜನಾಂಗದ ಮೇಲಿರುವ ಗುರುತರವಾದ ಜವಾಬ್ದಾರಿ ಎಂದರೆ ಐತಿಹಾಸಿಕ ಸ್ಮಾರಕ ವಾಸ್ತುಶಿಲ್ಪ ಹಾಗೂ ಶಾಸನ ಮುಂತಾದವುಗಳನ್ನು ರಕ್ಷಿಸಿಕೊಂಡು ಹೋಗುವುದಾಗಿದೆ.

* * *

# ಅಡಿ ಟಿಪ್ಪಣಿಗಳು

೧) ಅಥಣಿ ತಾಲೂಕು : ಸಮಗ್ರ ದರ್ಶನ
ಲೇಖನ : ಪ್ರೊ. ಸಂಗಮೇಶ ಗುಜಗೊಂಡ
ವಿಮೋಚನಾ ಪ್ರಕಾಶನ ಅಥಣಿ -೨
೨೦೦೭
ಪು : ೨

೨) ಬೆಲಗಮ್ ಡಿಸ್ಟ್ರಿಕ್ಟ ಗೆಜಟೀಯರ
ಸಂ: ಜೇಮ್ಸ ಎಂ. ಕ್ಯಾಂಪಬೆಲ್ -೧೮೮೫
ಪು : ೪೧

೩) ಕಾಮತ ಯು ಸೂರ್ಯನಾಥ -೧೯೮೬ ಕರ್ನಾಟಕ ರಾಜ್ಯ ಗೆಜಿಟಿಯರ್ (ಸಂಪುಟ-೧)
ಪು. ೧೫೫

೪) ಪಂಚಮುಖಿ ಆರ್.ಎಸ್. ಕರ್ನಾಟಕ ಇನ್ಸಕ್ರಿಪ್ಷನ್ಸ್
ಸಂಪುಟ : ೨
ಪು. ೪೮

೫) ಗುರುವ ಆರ್.ಎಸ್.
ಕರ್ನಾಟಕ ಭಾರತಿ -೧೯೭೦
ಸಂ. ೩
ಸಂಚಿಕೆ -೧

೬) ಶರಣ ಚೇತನ -
ಲೇಖನ : ಮೋಹನ ಅನೇಪ್ಪನವರ
ಸಂಚಿಕೆ : ೧೨
ಸಂ. : ೫ ಪು : ೧೧

೭) ಕರ್ನಾಟಕ ಇನ್‌ಸ್ಕ್ರಿಪ್ಷನ್ಸ್ ಸಂ. ೨
ಶಾಸನ -ಸಂ ೨೫
ಪು : ೯೩-೯೪

೮) ಕರ್ನಾಟಕ ಇನ್‌ಸ್ಕ್ರಿಪ್ಷನ್ಸ್
ಸಂ : ೨
ಶಾಸನ ಸಂ. ೧೩
ಪು. ೪೮

೯) ಡಾ॥ ಕಾಂಬಳೆ ಎಚ್.ಎಸ್. ೧೯೯೬, ಆರ್ಕಿಯಾಲಾಜಿ ಆಫ್ ದಿ ಅಪರ್ ಕೃಷ್ಣಾ ರೀಜನ್ (ಬೆಲ್ಗಮ್ ಡಿಸ್ಟ್ರಿಕ್ಟ) ಸಮ್ ಆಸ್ಪೆಕ್ಟ್ಸ (ಸಂಶೋಧನಾ ಮಹಪ್ರಭಂದ).

ಅಧ್ಯಾಯ -೩

# ಅಥಣಿ ಸಾಂಸ್ಕೃತಿಕ ಪರಂಪರೆ

- ರಾಜಕೀಯ ವ್ಯವಸ್ಥೆ
- ಸಾಮಾಜಿಕ ವ್ಯವಸ್ಥೆ
- ಆರ್ಥಿಕ ವ್ಯವಸ್ಥೆ
- ಧಾರ್ಮಿಕ ವ್ಯವಸ್ಥೆ

## ರಾಜಕೀಯ ವ್ಯವಸ್ಥೆ

ಶ್ರೇಷ್ಠ ಹಾಗೂ ಉಜ್ವಲ ಪರಂಪರೆಯನ್ನು ಹೊಂದಿದ ಪ್ರದೇಶಕ್ಕೆ ಭವ್ಯ ಚರಿತ್ರೆಯೊಂದು ನಿರ್ಮಾಣವಾಗುವುದು ಅದರ ರಾಜಕೀಯ ಸಾಮಾಜಿಕ ಧಾರ್ಮಿಕ ಮತ್ತು ಶೈಕ್ಷಣಿಕ ವ್ಯವಸ್ಥೆಗಳ ಶ್ರೇಷ್ಠತೆಯ ಆಧಾರದ ಮೇಲೆ. ಭಾರತದಲ್ಲಿ ಇಂತಹ ಅನೇಕ ಪ್ರದೇಶಗಳ ಚರಿತ್ರೆಯ ಸಾಂಸ್ಕೃತಿಕ ರಂಗದಲ್ಲಿ ಮಹತ್ವದ ಸ್ಥಾನ ಪಡೆದಿವೆ. ಇವುಗಳಲ್ಲಿ ಕರ್ನಾಟಕವು ಒಂದಾಗಿದ್ದು, ವಿವಿಧ ರಾಜ ಮನೆತನಗಳು ಇಲ್ಲಿ ಆಳ್ವಿಕೆ ಮಾಡಿ ಭವ್ಯ ಪರಂಪರೆಯನ್ನು ಉಳಿಸಿ ಹೋಗಿವೆ. ಕರ್ನಾಟಕಕ್ಕೆ ಸಾವಿರಾರು ವರ್ಷಗಳ ರಾಜಕೀಯ ಚರಿತ್ರೆಯಿದೆ. ಇಂತಹ ರಾಜಕೀಯ ಹಿನ್ನೆಲೆಯುಳ್ಳ ನಾಡಿನಲ್ಲಿ ವಿಶಾಲವಾದ ಭೂಪ್ರದೇಶವಿದೆ. ಪ್ರಾಚೀನ ಕರ್ನಾಟಕದ ರಾಜಕೀಯ ಚರಿತ್ರೆಯಂತೆ ಅಥಣಿ ಪ್ರದೇಶದ ರಾಜಕೀಯ ಚರಿತ್ರೆಯು ವೈವಿಧ್ಯಮಯ ಹಾಗೂ ವೈಶಿಷ್ಟ್ಯತೆಯಿಂದ ಕೂಡಿದೆ. ಶಾಸನೀಯ ಹಾಗೂ ಸ್ಮಾರಕಗಳ ಆಧಾರದ ಮೇಲೆ ಈ ಪ್ರದೇಶ ರಾಜಕೀಯ ವ್ಯವಸ್ಥೆಯನ್ನು ಚರಿತ್ರೆಯಲ್ಲಿ ಗುರುತಿಸಬಹುದು. ಅಥಣಿ ಪರಿಸರವು ಪ್ರಾಚೀನ ಕನ್ನಡ ನಾಡಿನಲ್ಲಿ ವಿವಿಧ ಆಡಳಿತ ವಿಭಾಗಗಳಿಂದ ವಿಭಜಿಸಲ್ಪಟ್ಟಿತ್ತು.

ಕರಹಾಡ -೪೦೦೦, ಕನ್ನಂಬಾಡಿ- ೩೦೦, ಮಿರಿಂಜೆ -೩೦೦೦, ತರ್ದವಾಡಿ -೧೦೦೦,

ತುಂಗಳ -೧೨, ಬನವಾಸಿ -೧೨೦೦೦, ಕೊರ್ಗಟನೂರು, ನೊಳಂಬವಾಡಿ -೯೬೦೦೦,

ಹಲಸಿಗೆ - ೧೨೦೦೦, ಮುಂತಾದವುಗಳು ಮುಖ್ಯವಾದ ವಿಭಾಗಗಳಾಗಿವೆ.

ಪ್ರಸ್ತುತ ಅಧ್ಯಯನದ ಅಥಣಿ ಪರಿಸರವು ಕನ್ನಡ ನಾಡನ್ನಾಳಿದ ವಿವಿಧ ಅರಸು ಮನೆತನಗಳಡಿಯಲ್ಲಿ ಮಹಾ ಮಂಡಳೇಶ್ವರ, ಮಹಾಸಾಮಂತ, ಪ್ರಭುಗಾವುಂಡ, ಗಾವುಂಡರ ನೇರ ಆಡಳಿತಕ್ಕೆ ಒಳಪಟ್ಟಿರುವದು. ಸಮಕಾಲೀನ ಶಾಸನ, ಪುರಾತತ್ವ ಮತ್ತು ಸಾಹಿತ್ಯಿಕ ಕುರುಹುಗಳಿಂದ ಮನದಟ್ಟಾಗುತ್ತದೆ. ಕಾವೇರಿಯಿಂದ ಗೋದಾವರಿ ನದಿಯವರೆಗೆ ವಿಶಾಲವಾಗಿದ್ದ ತಮ್ಮ ಸಾಮ್ರಾಜ್ಯವನ್ನು

ಆಡಳಿತದ ಅನಕೂಲಕ್ಕಾಗಿ ಪ್ರತಿಯೊಂದು ಅರಸು ಮನೆತನಗಳು ಹಲವು ಪ್ರಧಾನ ಮತ್ತು ಉಪವಿಭಾಗಗಳಲ್ಲಿ ವಿಂಗಡಿಸಿ ಆಳ್ವಿಕೆ ನಡೆಸಿದ್ದು ಕಂಡುಬರುತ್ತದೆ. ಇಂದಿನ ಅಥಣಿ ಪ್ರದೇಶವು ಅಂದು ಪಲಸಿಗೆ ಪನ್ನಿರ್ಚ್ಛಾಸಿರ, ಕರಹಾಡ-೪೦೦೦, ಮಿರಂಜೆ-೩೦೦೦, ಕನ್ನಂಬಾಡಿ (ಕಳಂಬಕೆ) -೩೦೦, ಕುಂತಳ ದೇಶ, ಸೇವುಣದೇಶ, ಮೂವತ್ತಾರುಂಬಾಡ ಮೊದಲಾದ ಪ್ರಾಂತಗಳಲ್ಲಿ ಅಂತರರ್ಗತವಾಗಿತ್ತು.

## ಮಾರ್ಯರು ಮತ್ತು ಶಾತವಾಹನರು

ಮಗಧದ ನಂದ ಮನೆತನದ (ಕ್ರಿ.ಶ.ಪೂ. ೪ನೇ ಶತಮಾನ) ಆಳ್ವಿಕೆಗೆ ಕುಂತಳನಾಡು ಎಂದು ಕರೆಯಲ್ಪಡುತ್ತಿದ್ದ ಕನ್ನಡ ನಾಡಿನ ಉತ್ತರ ಭಾಗವು ಒಳಪಟ್ಟಿತ್ತೆಂದು ಸಿಂಗಿರಾಜನ ಸಿಂಗಿರಾಜ ಪುರಾಣದಲ್ಲಿ ಉಲ್ಲೇಖಿತವಾಗಿದೆ. ವಿಪರ್ಯಾಸವೆಂದರೆ ಮೌರ್ಯ ಮತ್ತು ಶಾತವಾಹನ ಮನೆತನದ ಯಾವುದೇ ಶಾಸನ ಅಥಣಿ ಪರಿಸರದಲ್ಲಿ ಲಭ್ಯವಾಗಿಲ್ಲ. ಆದರೂ ಈ ಪ್ರದೇಶ ಮೌರ್ಯ ಮತ್ತು ನಂದರ ಆಳ್ವಿಕೆಯ ಪ್ರಭಾವದಲ್ಲಿತ್ತೆಂದು ಶಾಸನೀಯ ಹಾಗೂ ಸಾಹಿತ್ಯಿಕ ಆಕರಗಳು ಪರೋಕ್ಷವಾಗಿ ದೃಢಪಡಿಸುತ್ತವೆ. ಇದರ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆಗಳು ನಡೆಯಬೇಕಾಗಿವೆ.

## ಕದಂಬರು

ಶಾತವಾಹನರ ಅವನತಿಯ ನಂತರ ಉತ್ತರ ಕರ್ನಾಟಕದ ಭಾಗವು ಬನವಾಸಿಯ ಕದಂಬರ ಆಳ್ವಿಕೆಗೆ ಒಳಪಟ್ಟಿತ್ತು. ಕದಂಬರು ಕ್ರಿ.ಶ. ೪ ನೇ ಶತಮಾನದಿಂದ ೬ ನೇಯ ಶತಮಾನದ ವರೆಗೆ ರಾಜ್ಯಭಾರ ಮಾಡಿದ್ದಾರೆ.[೧] ಬೆಳಗಾವಿ ಜಿಲ್ಲೆಯ ಖಾನಾಪೂರ ತಾಲೂಕಿನ ಹಲಸಿಯು ಈ ಮನೆತನದ ಎರಡನೇಯ ರಾಜಧಾನಿಯಾಗಿತ್ತು. ಅಥಣಿ ಪರಿಸರದ ಮಂಗಸೂಳಿಯಲ್ಲಿ ಈ ಮನೆತನದ ಕ್ರಿ.ಶ. ೩೧೦ ತಾಮ್ರಪಟ ಶಾಸನ ಬೆಳಕಿಗೆ ಬಂದಿದೆ. ಇದರಲ್ಲಿ ಆ ಮನೆತನದ ವಂಶಾವಳಿ ಮತ್ತು ಬ್ರಾಹ್ಮಣರಿಗೆ ದಾನ ಮಾಡಿದ ವಿವರಗಳಿಗೆ. ಆದರೆ ಈ ಶಾಸನದ ಕಾಲಮಾನ, ಲಿಪಿ ಮತ್ತು ಭಾಷೆಯ ಲಕ್ಷಣಗಳನ್ನು ಗಮನಿಸಿದರೆ ಇದು ಕೂಡ ಶಾಸನದಂತೆ ತೋರುತ್ತದೆ. ಹೀಗಾಗಿ ಇದರ ವಿಶ್ವನೀಯತೆ ಪ್ರಶ್ನಾರ್ಹವಾಗಿದೆ. ಆದರೂ ಈ ಮೇಲಿನ ತಾಮ್ರಪಟದಿಂದ ಈ ಪರಿಸರವೂ ಕದಂಬ ಮನೆತನದ ಆಳ್ವಿಕೆಯ ಪ್ರಭಾವದಲ್ಲಿತ್ತೆಂಬುದನ್ನು ಪರೋಕ್ಷವಾಗಿ ದೃಡಪಡಿಸುತ್ತವೆ.

## ಬಾದಾಮಿಯ ಚಾಲುಕ್ಯರು

ಬನವಾಸಿಯ ಕದಂಬರ ನಂತರ ಕರ್ನಾಟಕದ ರಾಜಕೀಯ ರಂಗವನ್ನು ಪ್ರವೇಶಿಸಿದವರು ಬಾದಾಮಿಯ ಚಾಲುಕ್ಯರು. ಇವರು ಕ್ರಿ.ಶ. ೫೦೦ ರಿಂದ ೭೫೭ ರ ವರೆಗೆ ಆಳ್ವಿಕೆ ನಡೆಸಿದರು. ಅಥಣಿ ಪರಿಸರದಲ್ಲಿ ಈ ಮನೆತನಕ್ಕೆ ಸಂಬಂಧಿಸಿದ ಯಾವುದೇ ರೀತಿಯ ಕುರುಹುಗಳು ಈ ವರೆಗೆ ಬೆಳಕಿಗೆ ಬಂದಿಲ್ಲ. ಆದರೂ ಕೆಲವು ಶಾಸನಗಳಿಂದ ಈ ಪರಿಸರವೂ ಬಾದಾಮಿ ಚಾಲುಕ್ಯರ ಪ್ರಭಾವದಲ್ಲಿತ್ತೆಂದು ಮನದಟ್ಟಾಗುತ್ತದೆ.

## ರಾಷ್ಟ್ರಕೂಟರು

ಬಾದಾಮಿ ಚಾಲುಕ್ಯರನ್ನು ಬದಿಗೊತ್ತಿ ಈ ಪ್ರದೇಶದಲ್ಲಿ ರಾಜಕೀಯ ರಂಗವನ್ನು ಪ್ರವೇಶಿಸಿದವರು ಮಳಖೇಡದ ರಾಷ್ಟ್ರಕೂಟರು. ಇವರು ಕ್ರಿ.ಶ. ೭೦೦-೧೦೦೦ ವರೆಗೆ ರಾಜ್ಯಭಾರ ಮಾಡಿದ್ದಾರೆ. ಬೆಳಗಾವಿ ಜಿಲ್ಲೆಯ ಗೋಕಾಕದಲ್ಲಿ ಈ ಮನೆತನದ ಮಹಾರಾಜನ ಕ್ರಿ.ಶ. ೫೩೨ □ ೫೩೩ ರ ತಾಮ್ರ ಶಾಸನ ಮತ್ತು ಸವದತ್ತಿಯಲ್ಲಿ ೨ನೇಯ ಕೃಷ್ಣನ (ಕ್ರಿ.ಶ. ೮೮೦-೯೧೪) ಶಾಸನಗಳು ದೊರೆತಿವೆ. ಅಥಣಿ ಪರಿಸರದಲ್ಲಿ ಈ ಮನೆತನಕ್ಕೆ ಸಂಬಂಧಿಸಿದಂತೆ ಆಳ್ವಿಕೆ ಮಾಡಿದ ಬಗ್ಗೆ ಯಾವುದೇ ಕುರುಹುಗಳು ಈ ವರೆಗೆ ದೊರೆತಿಲ್ಲ. ಆದರೂ ಈ ಮೇಲಿನ ಶಾಸನಗಳಿಂದ ಈ ಪ್ರದೇಶವು ರಾಷ್ಟ್ರಕೂಟರ ಪ್ರಭಾವದಲ್ಲಿತ್ತೆಂದು ತಿಳಿದು ಬರುತ್ತದೆ. ಕದಂಬ, ಚಾಲುಕ್ಯ, ರಾಷ್ಟ್ರಕೂಟರ ಆಧೀನದಲ್ಲಿ ಸೇಂದ್ರಕ ಮನೆತನದ ಸಮಿಯರ, ವಿಜಯಶಕ್ತಿ, ಕುಂದಶಕ್ತಿ, ಕಣ್ಣಶಕ್ತಿ, ರವಿಶಕ್ತಿ ಎಂಬ ಅರಸರು ಬಾದಾಮಿ ಚಾಲುಕ್ಯ ಅರಸರ ಮಹಾಮಂಡಳೇಶ್ವರರಾಗಿ ಕೂಹುಂಡಿ ಏಳನೂರು ಪ್ರಾಂತದಲ್ಲಿ ಮತ್ತು ಅದಕ್ಕೆ ಹೊಂದಿಕೊಂಡಿದ್ದ ಮಹಾರಾಷ್ಟ್ರದ ಪ್ರದೇಶವನ್ನಾಳುತ್ತಿದ್ದರೆಂದು ಬೆಳಗಾವಿ ತಾಲೂಕಿನ ಅಲತಗಾದ ಆರನೇಯ ಶತಮಾನದ ಶಾಸನ ಮತ್ತು ಸವದತ್ತಿ ತಾಲೂಕಿನ ಹೂಲಿಯ ಕ್ರಿ.ಶ. ಸುಮಾರ ೬ನೇಯ ಶತಮಾನದ ತಾಮ್ರಪಟ ಶಾಸನಗಳು ಉಲ್ಲೇಖಿಸಿವೆ. ಈ ಮನೆತನದ ಇಂದ್ರಾನಂದ ಮತ್ತು ವಿಜಯಾನಂದ ಅರಸರು ರಾಷ್ಟಕೂಟ ಮನೆತನದ ಮಹಾಮಂಡಳೇಶ್ವರರಾಗಿ ಆಳುತ್ತಿದ್ದರೆಂದು ಗೋಕಾಕದ ಕ್ರಿ.ಶ. ೫೩೨-೫೩೩ ರ ತಾಮ್ರಪಟ ಶಾಸನ ಉಲ್ಲೇಖಿಸಿದೆ. ಆದರೆ ಅಥಣಿ ಪರಿಸರದಲ್ಲಿ ಸೇಂದ್ರಕ ಮನೆತನಕ್ಕೆ ಸಂಬಂಧಿಸಿದಂತೆ ಯಾವುದೇ ಕುರುಹುಗಳು ಈ ವರೆಗೆ ದೊರೆತಿಲ್ಲ. ಆದರೂ ಈ ಮೇಲಿನ ಶಾಸನಗಳಿಂದ ಈ ಪರಿಸರವೂ ಆ ಮನೆತನದ ಆಳ್ವಿಕೆಯ ಪ್ರಭಾವದಲ್ಲಿತ್ತೆಂದು ಪರೋಕ್ಷವಾಗಿ ದೃಢಪಟ್ಟಿದೆ.

## ಕಲ್ಯಾಣಿ ಚಾಲುಕ್ಯರು

ರಾಷ್ಟ್ರಕೂಟರ ಅವನತಿಯ ನಂತರ ಈ ಪ್ರದೇಶದ ರಾಜಕೀಯ ರಂಗವನ್ನು ಪ್ರವೇಶಿಸಿದವರು ಕಲ್ಯಾಣದ ಚಾಲುಕ್ಯರು. ಇವರು ಕ್ರಿ.ಶ. ೯೭೩-೧೧೮೯ ರ ವರೆಗೆ ರಾಜ್ಯಭಾರ ಮಾಡಿದ್ದಾರೆ. ಇವರ ಸಾಮ್ರಾಜ್ಯ ಇಂದಿನ ಕನ್ನಡ ನಾಡನ್ನೊಳಗೊಂಡಂತೆ ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶದ ಕೆಲವು ಬಾಗಗಳನ್ನೊಳಗೊಂಡಿತ್ತು. ಈ ಮನೆತನದ ಆಳ್ವಿಕೆಯ ಪ್ರಾರಂಭದಿಂದ ಅಥಣಿ ಪರಿಸರದ ರಾಜಕೀಯ ಇತಿಹಾಸವು ಸ್ಪಷ್ಟವಾಗಿ ಗೋಚರವಾಗಿದೆ. ಈ ಪರಿಸರದಲ್ಲಿ ಕಲ್ಯಾಣಿ ಚಾಲುಕ್ಯರ ಆಳ್ವಿಕೆಗೆ ಸಂಬಂಧಿಸಿದಂತೆ ಅನೇಕ ಶಾಸನಗಳು, ದೇವಾಲಯಗಳು, ಶಿಲ್ಪಗಳು, ಸ್ಮಾರಕಗಲ್ಲುಗಳು, ನಾಣ್ಯಗಳು ಮೊದಲಾದ ಪುರಾತತ್ವ ಅವಶೇಷಗಳು ಬೆಳಕಿಗೆ ಬಂದಿವೆ. ಕೊಟ್ಟಲಗಿಯ ಕ್ರಿ.ಶ. ೧೦೨೨ ರ ಶಾಸನವು ಜಗದೇಕಮಲ್ಲ ದೇವನ ಹಾಗೂ ಎರಡನೇಯ ಜಯಸಿಂಹನ ಕ್ರಿ.ಶ. ೧೦೧೫ - ೧೦೪೪ ಶಾಸನಗಳು ಕೊಕಟನೂರಿನ ಕ್ರಿ.ಶ. ೧೦೫೦-೫೧ ರ ಶಾಸನ, ಒಂದನೇಯ ಸೋಮೇಶ್ವರ (ಕ್ರಿ.ಶ.೧೦೪೪-೧೦೬೮) ರಾಮತೀರ್ಥದ ಕ್ರಿ.ಶ. ೧೧೧೫ ರ ಶಾಸನ, ತೆಲಸಂಗದ ಕ್ರಿ.ಶ. ೧೧೨೨ ರ ಶಾಸನ, ಕೊಕಟನೂರದ ಕ್ರಿ.ಶ. ೧೧೨೬ ರ ಶಾಸನ, ಬಳ್ಳಿಗೇರಿಯ ಕ್ರಿ.ಶ. ಸುಮಾರು ೧೨ನೇ ಶತಮಾನದ ಶಾಸನಗಳು (ಅಪ್ರಕಟಿತ), ಆರನೇಯ ವಿಕ್ರಮಾದಿತ್ಯನ (ಕ್ರಿ.ಶ. ೧೦೭೬-೧೧೨೭), ತೆಲಸಂಗದ ಶಾಸನ, ಜಗದೇಕ ಮಲ್ಲನ (ಕ್ರಿ.ಶ. ೧೧೩೯-೧೧೪೯) ಶಾಸನಗಳು ಇವರೆಲ್ಲರ ಆಳ್ವಿಕೆಯ ಕಾಲವನ್ನು

ಪರಿಚಯಿಸಿವೆ. ಈ ಅವಧಿಯಲ್ಲಿ ಅಥಣಿ ಪರಿಸರವು ಕಲ್ಯಾಣಿ ಚಾಲುಕ್ಯರ ಸಾಮಂತರ ಆಧೀನದಲ್ಲಿ ಅನೇಕ ಜನ ಪ್ರಭುಗಾವುಂಡರು, ಗಾವುಂಡರು, ದಂಡನಾಯಕರು, ಪೆಗ್ಗರಡೆಗಳು, ಸೇನಬೋವರು ಮೊದಲಾದವರು ಗ್ರಾಮಮಟ್ಟದಲ್ಲಿ ಆಳ್ವಿಕೆ ನಡೆಸಿರುವದು ಸಮಕಾಲೀನ ಶಾಸನಗಳಿಂದ ಸ್ಪಷ್ಟವಾಗುತ್ತದೆ.

### ಕಲಚೂರಿಗಳು

ಕಲ್ಯಾಣಿ ಚಾಲುಕ್ಯ ಮನೆತನದ ಆಧೀನದಲ್ಲಿ ಆಳ್ವಿಕೆಯನ್ನು ಪ್ರಾರಂಭಿಸಿದ ಕಲ್ಯಾಣದ ಕಲಚೂರಿಗಳ ಮನೆತನ ಕ್ರಿ.ಶ. ೧೧೬೨ ರಿಂದ ೧೧೮೪ ರವರೆಗೆ ಆಳ್ವಿಕೆ ನಡೆಸಿದೆ. ಅಥಣಿ ಪರಿಸರವೂ ಈ ಮನೆತನದ ಆಳ್ವಿಕೆಯ ಪ್ರಭಾವದಲ್ಲಿತ್ತೆಂಬುದಕ್ಕೆ ಕೊಕಟನೂರಿನ ಕ್ರಿ.ಶ. ೧೧೭೦, ೭೧ ರ ಶಾಸನ, ಕ್ರಿ.ಶ. ೧೧೬೯ ರ ಶಾಸನ, ರಾಮತೀರ್ಥದ ಕ್ರಿ.ಶ. ೧೧೬೭ ರ ಶಾಸನ, ಬಳ್ಳಿಗೇರಿಯ ಕ್ರಿ.ಶ. ೧೨ ನೇ ಶತಮಾನದ ಅಪ್ರಕಟಿತ ಶಾಸನಗಳು ಹಾಗೂ ತೆಲಸಂಗದ ೧೨ ನೇಯ ಶಾಸನಗಳು ಕಲಚೂರಿಗಳ ಆಳ್ವಿಕೆಗೆ ಪ್ರಮುಖ ಆಕರಗಳಾಗಿವೆ. ಕಲಚೂರಿಗಳ ಆಳ್ವಿಕೆಯ ಅವಧಿಯಲ್ಲಿ ಅಥಣಿ ಪರಿಸರದಲ್ಲಿ ಅನೇಕ ದೇವಾಲಯಗಳು ನಿರ್ಮಾಣವಾಗಿವೆ. ಉದಾಹರಣೆಗೆ ಮದಭಾವಿಯ ರಾಮಲಿಂಗೇಶ್ವರ ಮತ್ತು ಮಹಾದೇವ (ದ್ವಿಕೂಟ) ದೇವಾಲಯಗಳು ಮಹತ್ವದ ವಾಸ್ತುಶಿಲ್ಪಗಳಾಗಿವೆ.

### ಸೇವುಣರು

ಮಳಖೇಡ ರಾಷ್ಟ್ರಕೂಟರು ಮತ್ತು ಕಲ್ಯಾಣದ ಚಾಲುಕ್ಯರ ಆಧೀನದಲ್ಲಿ ಆಳ್ವಿಕೆಯನ್ನು ಪ್ರಾರಂಭಿಸಿದ ದೇವಗಿರಿಯ ಸೇವುಣರು ಕ್ರಮೇಣ ಸ್ವತಂತ್ರವಾಗಿ ಕ್ರಿ.ಶ. ಸುಮಾರು ೧೨ ರಿಂದ ೧೪ ನೇಯ ಶತಮಾನದ ವರೆಗೆ ಆಡಳಿತ ನಡೆಸಿದ್ದಾರೆ. ಅಥಣಿ ಪರಿಸರವು ಸೇವುಣರ ಆಡಳಿತದ ಭಾಗವಾಗಿತ್ತು. ಅಥಣಿ ಪರಿಸರದಲ್ಲಿ ಸೇವುಣರಿಗೆ ಸಂಬಂಧ ಪಟ್ಟಂತೆ ಯಕ್ಕಂಚಿಯ ಕ್ರಿ.ಶ. ೧೧೪೭ ರ ಶಾಸನ, ಕೊಕಟನೂರಿನ ಕ್ರಿ.ಶ. ೧೨೨೫ ರ ಶಾಸನ ಮದಭಾವಿಯ ಕ್ರಿ.ಶ. ೧೨೩೫ ರ ಶಾಸನಗಳು ಸೇವುಣ ಮನೆತನದ ಸಿಂಘಣ ದೇವನ (ಕ್ರಿ.ಶ. ೧೧೯೯–೧೨೪೭) ಮತ್ತು ಕೊಕಟನೂರಿನ ಕ್ರಿ.ಶ. ೧೩೦೬ ರ ಶಾಸನವು ರಾಮಚಂದ್ರ ದೇವನ (ಕ್ರಿ.ಶ. ೧೨೭೭–೧೩೧೨) ಆಳ್ವಿಕೆಗಳನ್ನು ಪರಿಚಯಿಸಿವೆ. ಈ ಮನೆತನದ ಆಳ್ವಿಕೆಯಲ್ಲಿ ಈ ಪರಿಸರದಲ್ಲಿ ಹಲವಾರು ಸಾಂಸ್ಕೃತಿಕ ಚಟುವಟಿಕೆಗಳು ಜರುಗಿರುವುದಕ್ಕೆ ಈ ಮೇಲಿನ ಶಾಸನಗಳು ನಿದರ್ಶನಗಳಾಗಿವೆ.

### ಶಿಲಾಹಾರರು

ಮಳಖೇಡದ ರಾಷ್ಟ್ರಕೂಟರ ಅಧೀನದಲ್ಲಿ ಕೊಲ್ಲಾಪೂರದ ಶಿಲಾಹಾರ ಮನೆತನವು ಅಥಣಿ ಪರಿಸರದಲ್ಲಿ ಆಳ್ವಿಕೆ ಮಾಡಿದ್ದರು ಎಂಬುದಕ್ಕೆ ಶಾಸನಗಳು ಲಭ್ಯವಾಗಿವೆ. ಶೇಡಬಾಳದ ಕ್ರಿ.ಶ. ೧೧೫೩ ರ ಶಾಸನ, ಜೂಗಳದ ಕ್ರಿ.ಶ. ಸುಮಾರು ೧೨ ನೇಯ ಶತಮಾನದ ಶಾಸನಗಳು ಈ ಮನೆತನದ ವಿಜಯಾದಿತ್ಯನ (ಕ್ರಿ.ಶ. ೧೧೩೮–೧೧೭೫) ಆಳ್ವಿಕೆಯನ್ನು ಪರಿಚಯಿಸಿವೆ. ಶಿಲಾಹಾರ ಮನೆತನದ ಆಳ್ವಿಕೆಯ ಅವಧಿಯಲ್ಲಿ ಅಥಣಿ ಪರಿಸರದಲ್ಲಿ ದೇವಾಲಯಗಳ ಜೀರ್ಣೋದ್ಧಾರ, ಅವುಗಳಿಗೆ

ದಾನದತ್ತಿಗಳನ್ನು ಕೊಡುವ ಸಾಂಸ್ಕೃತಿಕ ಚಟುವಟಿಕೆಗಳು ಜರುಗಿದ ಬಗ್ಗೆ ಆಧಾರಗಳು ದೊರಕಿವೆ.

### ವಿಜಯನಗರದ ಅರಸರು

ಹೊಯ್ಸಳ ಮನೆತನದ ಆಳ್ವಿಕೆಯ ಬಗ್ಗೆ ಅಥಣಿ ಪರಿಸರದಲ್ಲಿ ಯಾವುದೇ ಕುರುಹುಗಳು ದೊರೆತಿಲ್ಲ. ಹೊಯ್ಸಳರ ಅವನತಿಯ ನಂತರ ವಿಜಯ ನಗರದ ಅರಸರು ರಾಜಕೀಯ ರಂಗ ಪ್ರವೇಶಿಸಿದ್ದಾರೆ. (ಕ್ರಿ.ಶ. ೧೩೩೬ ರಿಂದ ೧೫೬೫) ಇವರ ಅಧೀನದಲ್ಲಿ ಅಥಣಿ ಪ್ರದೇಶದಲ್ಲಿ ಕೆಲವು ಅಧಿಕಾರಿಗಳು ಆಡಳಿತ ನಡೆಸಿದ್ದಾರೆ. ಉದಾಹರಣೆಗೆ ಭೀಮಾನದಿ ತೀರದ ಅವರಾದಿ ಗ್ರಾಮದಿಂದ ಈ ಪರಿಸರಕ್ಕೆ ಆಗಮಿಸಿ, ಅಧಿಕಾರ ನಡೆಸಿದ ಗದಿಗೆಪ್ಪನ ಆಡಳಿತವನ್ನು ಮೆಚ್ಚಿದ ಆನೆಗುಂದಿಯ ರಾಮರಾಜನು ಕೊಕಟನೂರ ಗ್ರಾಮವನ್ನು ಇನಾಂ-ವಾಗಿ ಕೊಟ್ಟನು ಎಂಬುದು ಶಾಸನದಿಂದ ವೇದ್ಯವಾಗುತ್ತದೆ.[೩]

### ಆದಿಲ್‌ಶಾಹಿಗಳು ಮತ್ತು ಮರಾಠರು

ವಿಜಯನಗರದ ಆಳ್ವಿಕೆಯ ಅವನತಿಯ ನಂತರ ಈ ಪರಿಸರವು ಕ್ರಿ.ಶ. ೧೫೮೩ ರಿಂದ ೧೬೮೬ ರ ವರೆಗೆ ವಿಜಾಪೂರದ ಆದಿಲ್‌ಶಾಹಿ ಮನೆತನದ ಆಳ್ವಿಕೆಯಲ್ಲಿತ್ತು. ಆದಿಲ್‌ಶಾಹಿ ಗಳ ಕಾಲದಲ್ಲಿ ಅಥಣಿ ಪಟ್ಟಣ ಪ್ರಮುಖ ವ್ಯಾಪಾರಿ ಕೇಂದ್ರವಾಗಿತ್ತು. ಆದಿಲ್‌ಶಾಹಿ ಆಳ್ವಿಕೆಯಲ್ಲಿ ಅಥಣಿ ಪರಿಸರದಲ್ಲಿ ಇಸ್ಲಾಂ ಸಂಸ್ಕೃತಿಗೆ ಸಂಬಂಧಿಸಿದ ಮಸಿದಿಗಳು ನಿರ್ಮಾಣವಾಗಿವೆ. ಅಲ್ಲದೆ ಇಲ್ಲಿನ ಹಿಂದೂ ದೇವಾಲಯಗಳ ನಿರ್ಮಾಣದ ಶೈಲಿಯಲ್ಲಿ ಇಸ್ಲಾಂ ಶೈಲಿಯ ಪ್ರಭಾವವನ್ನು ಕಾಣಬಹುದು. ಉದಾಹರಣೆಗೆ ಅಥಣಿಯ ಶ್ರೀ ಸಿದ್ಧೇಶ್ವರ ದೇವಾಲಯ. ಅಥಣಿ ಪರಿಸರವು ಆದಿಲ್‌ಶಾಹಿಗಳ ಆಳ್ವಿಕೆಗೆ ಒಳಪಟ್ಟಿತ್ತೆಂಬುದಕ್ಕೆ ಸ್ಪಷ್ಟವಾದ ಆಧಾರಗಳು ಲಭ್ಯವಾಗಿವೆ. ಆದಿಲ್ ಶ್ಯಾಹಿಗಳ ದುರ್ಬಲತೆಯ ಲಾಭ ಪಡೆದುಕೊಂಡು ಅಥಣಿ ಪ್ರದೇಶದಲ್ಲಿ ಮರಾಠರು ಪ್ರಾಬಲ್ಯಕ್ಕೆ ಬಂದರು. ಇವರ ಅಧೀನದಲ್ಲಿ ದೇಶಗತ್ತಿಗಳು ಈ ಪ್ರದೇಶವನ್ನು ಆಳಿದ್ದಾರೆ. ಕೆಲಕಾಲ ಮೊಗಲರ ಅಧಿಕಾರಿಯಾದ ನಿಜಾಮ-ಉಲ್-ಮುಲ್ಕನು ಸ್ವತಂತ್ರವಾಗಿ ಆಳ್ವಿಕೆ ನಡೆಸಿದನು. ಕಾಲಾನಂತರ ಈ ಪ್ರದೇಶವು ಕೆಲ ಕಾಲ ಕೊಲ್ಲಾಪೂರ ಮತ್ತು ಸತಾರ ಪ್ರಾಂತ್ಯಗಳ ಆಡಳಿತದ ಪ್ರಭಾವದಲ್ಲಿದ್ದದು ಕಂಡು ಬರುತ್ತದೆ. ತದನಂತರ ಅಥಣಿ ಪ್ರದೇಶವು ಬ್ರಿಟಿಷರ ಆಳ್ವಿಕೆಗೆ ಒಳಪಟ್ಟು ಮುಂಬೈ ಪ್ರಾಂತ್ಯಕ್ಕೆ ಸೇರ್ಪಡೆಯಾಯಿತು. ಬ್ರಿಟಿಷರ ವಿರುದ್ಧ ಕೈಗೊಂಡ ಸ್ವಾತಂತ್ರ್ಯ ಚಳುವಳಿಯಲ್ಲಿ ಅಥಣಿ, ಸತ್ತಿ, ಮಂಗಸೂಳಿ ಮತ್ತು ಜೂಗುಳ ಗ್ರಾಮಗಳು ಹೋರಾಟಗಾರರ ಪ್ರಧಾನ ಕೇಂದ್ರಗಳಾಗಿದ್ದವು. ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ಅಥಣಿ ಪರಿಸರದ ಮಹನೀಯರೆಂದರೆ ಶ್ರಿಯುತ ಎ.ಎಸ್. ಕುಲಕರ್ಣಿ, ವೆಂಕಟರಾವ ಜೋಶಿ, ಜಿ.ಎಮ್. ದೇಶಪಾಂಡೆ, ರಾಮಕೃಷ್ಣ ಪೂಜಾರಿ, ನಾಮದೇವ ಪತ್ತಾರ ಪ್ರಮುಖರಾಗಿದ್ದಾರೆ.

## ಸಾಮಾಜಿಕ ವ್ಯವಸ್ಥೆ

ಸಾಮಾಜಿಕ ವ್ಯವಸ್ಥೆಯು ಸಮಾಜದ ಅನೇಕ ಅಂಶಗಳನ್ನು ಒಳಗೊಂಡ ಅತ್ಯಂತ ವಿಶಾಲವಾದ

ವ್ಯಾಪ್ತಿಯನ್ನುಳ್ಳ ಅಧ್ಯಯನವಾಗಿರುತ್ತದೆ. ಪರಸ್ಪರ ಸಂಬಂಧವುಳ್ಳ ಜನತೆಯ ವ್ಯವಸ್ಥಿತ ಸಮೂಹವನ್ನು ಸಮಾಜವೆನ್ನಬಹುದು. ಸಮಾಜವೆಂದ ಬಳಿಕ ಅದರಲ್ಲಿ ಅನೇಕ ವರ್ಗ, ವರ್ಣ, ಜಾತಿ, ಸಂಘ ಸಂಸ್ಥೆ ಮತ್ತು ಅವುಗಳ ಆಲೋಚನಾ ಕ್ರಮ ಇತ್ಯಾದಿ ಅಂಶಗಳು ಸೇರ್ಪಡೆಯಾಗಿರುತ್ತವೆ. ಅವು ಸಾಮಾಜಿಕ ಒಪ್ಪಿತ ಮೌಲ್ಯಕ್ಕೆ ಬದ್ಧವಾಗಿರುತ್ತವೆ. ಅಂದರೆ ಅನುಕೂಲ ಮತ್ತು ಭದ್ರತೆಗೆ ಒಂದು ಬಗೆಯ ಒಪ್ಪಂದವೇರ್ಪಟ್ಟಿರುತ್ತದೆ.

ಶಿಸ್ತು, ಒಕ್ಕಟ್ಟು, ಸಹಕಾರ, ಸಂಯಮಗಳಿಂದ ಕೂಡಿದ ಸಮಾಜ ಸ್ವರ್ಗಕ್ಕಿಂತ ಮಿಗಿಲಾದುದು ಎಂದು ಭಾವಿಸಬಹುದು. ಪ್ರಜೆಗಳು ತಮ್ಮ ನಡೆ -ನುಡಿಗಳಿಂದ ಒಬ್ಬರಿಗೊಬ್ಬರು ಅರಿತು ಬೆರೆತು ನಡೆದರೆ ಅದೇ ಸ್ವರ್ಗವಾಗಲು ಸಾಧ್ಯವೆಂಬ ಅಥಣಿ ಪ್ರದೇಶವನ್ನಾಳಿದ ಅರಸರ ಕಾಲದ ಸಾಮಾಜಿಕ ವ್ಯವಸ್ಥೆಯನ್ನು ಅವಲೋಕಿಸಿದಾಗ ಕಂಡುಬರುತ್ತದೆ.

## ವರ್ಗ, ವರ್ಣ, ಜಾತಿ, ವೃತ್ತಿ

ಪ್ರಾಚೀನ ವರ್ಣಪದ್ಧತಿ ರೂಪುಗೊಳ್ಳುವುದಕ್ಕಿಂತ ಮೊದಲು ಸಮಾಜವನ್ನು ವೃತ್ತಿಗನುಗುಣವಾಗಿ ವರ್ಗೀಕರಣ ಮಾಡಲಾಗುತ್ತಿತ್ತು.[೪] ವೃತ್ತಿಗಳು ಪ್ರಾಚೀನ ಕಾಲದಲ್ಲಿಯೇ ಜಾತಿಗಳಾಗಿ ರೂಪಗೊಂಡಿದ್ದುವೇ ಎಂಬುದರ ಬಗ್ಗೆ ಒಮ್ಮತವಿಲ್ಲ. ಅಲ್ಲದೆ ಈ ವೃತ್ತಿಗಳು ವಂಶಪರಂಪರೆಯಾಗಿದ್ದವೆಂದು ತೋರಿಸಲು ಯಾವ ಆಧಾರಗಳೂ ಇಲ್ಲ. ವೇದಗಳಲ್ಲಿಯೇ ಅತ್ಯಂತ ಪ್ರಾಚೀನವಾದ ಋಗ್ವೇದದಲ್ಲಿ ವರ್ಣಭೇದದ ಕುರುಹುಗಳೇ ಇಲ್ಲ. ವರ್ಣ ಎಂಬ ಶಬ್ದವು ಜಾತಿಸೂಚಕವಾಗಿರದೇ ಅದು ಮಧ್ಯ ಏಷಿಯಾದಿಂದ ಬಂದ ಆರ್ಯರ ಮತ್ತು ಇಲ್ಲಿಯ ಮೂಲನಿವಾಸಿಗಳಾದ ದ್ರಾವಿಡರ ನಡುವಿನ ವ್ಯತ್ಯಾಸವನ್ನು (ಭಾಷೆ, ಮತ, ಧರ್ಮ, ಬಣ್ಣ, ಆಕಾರ) ಸೂಚಿಸುವ ಪದವಾಗಿದೆ. ಈ ವರ್ಣ ವ್ಯವಸ್ಥೆಯಲ್ಲಿ ಈಗಿನ ಜಾತಿ ಪದ್ಧತಿಯಂತೆ ಈ ರಕ್ತಸಂಬಂಧವು ನಿಷಿದ್ಧವೆನಿಸಿರಲಿಲ್ಲ. ಅನೇಕ ಸಲ ಅಂತರವರ್ಣ ವಿವಾಹಗಳು ನಡೆಯುತ್ತಿದ್ದುದರ ಉಲ್ಲೇಖಗಳು ಜಾತಕಗಳಲ್ಲಿ ಬಂದಿದೆ.

ಭಾರತದಲ್ಲಿ ಜಾತಿ ವ್ಯವಸ್ಥೆಯ ಮೂಲ ಬಹು ಪ್ರಾಚೀನವಾದುದಾಗಿದೆ. ಮನು ವರ್ಣಸಾಂಕರ್ಯದಿಂದ ಬೇರೆ ಬೇರೆ ಜಾತಿಗಳು ಹುಟ್ಟಿದವು ಎಂದು ಅಭಿಪ್ರಾಯಪಡುತ್ತಾನೆ. ಜಾತಿ ಪದ್ಧತಿ ರೂಢಿಯಲ್ಲಿ ಹೇಗೆ ಬಂದಿತೆಂಬುದರ ಬಗೆಗೆ ಅನೇಕ ಅಭಿಪ್ರಾಯಗಳಿವೆ. ಬೌದ್ಧರ್ಮದ ಪ್ರಚಾರದ ನಂತರದಲ್ಲಿ ಬೌದ್ಧರು ಕೀಳೆಂದು ಪರಿಗಣಿಸಿ ಮಾಂಸ ಸೇವನೆ ಹಾಗೂ ಬಹುಪತ್ನಿತ್ವವನ್ನು ತೊರೆದು ಬ್ರಾಹ್ಮಣರು ತಮ್ಮ ವೈಶಿಷ್ಟ್ಯ. ರಕ್ಷಣೆಯೇ ಮುಖ್ಯ ಉದ್ದೇಶವಾಯಿತೋ ಆಗ ಪರಸ್ಪರ ಕೊಳ್ಳುವುದು ಕೊಡುವುದು ಇಲ್ಲವಾದವು. ಕೊಳ್ಳು-ಕೊಡುಗೆಗಳು ನಿಂತಾಗ ಬೇರೆ ಬೇರೆ ವರ್ಗಗಳಿಗೆ ಸೇರಿದ ಜನರು ಪರಸ್ಪರಿಂದ ದೂರವಾದರೂ ಅವರಲ್ಲಿ ಮೇಲು ಕೀಳೆಂಬ ಭಾವನೆ ಬೆಳಯಲಾರಂಭಿಸಿತು. ಇದು ಜಾತಿಯುಂಟಾಗುವುದಕ್ಕೆ ತಳಹದಿಯಾಯಿತು.

ಸಮಾಜದಲ್ಲಿ ಮೇಲು ಕೀಳೆಂಬ ಭಾವನೆಯುಂಟಾಗಿ ಪರಿಸ್ಥಿತಿಯು ಎಂತಹ ಮಟ್ಟವನ್ನು ಮುಟ್ಟಿತ್ತೆಂದರೆ ಕೀಳು ಜಾತಿಯವರು ಬ್ರಾಹ್ಮಣರು ಕ್ಷತ್ರಿಯರು ಮಾಡುತ್ತಿರುವ ಯಜ್ಞ ಯಾಗಾದಿಗಳಲ್ಲಿ

ಪಾಲ್ಗೊಳ್ಳುವ ಹಕ್ಕು ಹೋಯಿತು. ಅಧ್ಯಯನ ಅಧ್ಯಾಪನಾದಿಗಳಿಂದ ಅವರು ದೂರವಾದರೂ ಆಡಳಿತ ವ್ಯವಸ್ಥೆಯಲ್ಲಿ ಉನ್ನತ ಹುದ್ದೆಗಳು ನಿಲುಕದಂತಾದವು. ಕೊನೆಗೆ ಮೇಲಿನ ಜಾತಿಯವರ (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ) ಸೇವೆ ಮಾಡುವ ಕಾರ್ಯ ಮಾತ್ರ ಶೂದ್ರರ ಪಾಲಿಗೆ ಉಳಿದುಕೊಂಡಿತು.

ಬ್ರಾಹ್ಮಣರು

ಬ್ರಾಹ್ಮಣರು ಸಮಾಜದಲ್ಲಿ ಇತರ ವರ್ಗಗಳಿಗಿಂತಲೂ ಉನ್ನತವಾದ ಸ್ಥಾನವನ್ನು ಮತ್ತು ಗೌರವವನ್ನು ಪಡೆದಿದ್ದರು. ತಮ್ಮ ಕೌಶಲ್ಯ ಹಾಗೂ ನೈಪುಣ್ಯತೆಗಳಿಂದ ಅವರು ಪ್ರಾಚೀನ ಕಾಲದಿಂದಲೂ ಇತ್ತೀಚಿನ ವರೆಗೆ ಗುರುಗಳಂತೆ, ಪುರೋಹಿತರಂತೆ ವರ್ತಿಸುತ್ತಿದ್ದರು. ಅವರು ಪಡೆದ ಪಾಂಡಿತ್ಯಗಳಿಂದಾಗಿ ಅವರನ್ನು ಭೂದ್ವಿಜ ರೆಂದು ಪರಿಗಣಿಸಲಾಗಿದೆ. ಪ್ರಾಚೀನ ಕಾಲದಲ್ಲಿ ರಾಜರು ಅಧಿಕಾರಿಗಳು ಶ್ರೀಮಂತರು ಬ್ರಾಹ್ಮಣರಿಗೆ ಕಾಣಿಕೆಗಳನ್ನು ನೀಡುತ್ತಿದ್ದರು. ಹೀಗೆ ಜನರಿಂದ ಪಡೆದ ಕಾಣಿಕೆಯಿಂದಲೇ ತಮ್ಮ ಜೀವನವನ್ನು ಸಾಗಿಸುತ್ತ ಇವರು ಸಮಾಜ ಹಾಗೂ ದೇವಾಲಯಗಳಿಗೆ ತಮ್ಮ ಸೇವೆಯನ್ನು ಮೀಸಲಿರಿಸುತ್ತಿದ್ದರು. ಈ ಬ್ರಾಹ್ಮಣರ ಸಂಖ್ಯೆ ಇತರ ವರ್ಗಗಳಿಗಿಂತಲೂ ಹೆಚ್ಚಾಗಿದ್ದರಿಂದ ಮತ್ತು ಶೈಕ್ಷಣಿಕ ಚಟುವಟಿಕೆಗಳು ಹೆಚ್ಚಿನ ಪ್ರಮಾಣದಲ್ಲಿ ನಡೆಯುತ್ತಿದ್ದವು. ಅವರ ವಿದ್ಯಾಕೇಂದ್ರಗಳು ಅಗ್ರಹಾರಗಳಾಗಿದ್ದವು ಇದರಿಂದಾಗಿ ಅಗ್ರಹಾರದಲ್ಲಿದ್ದ ಸ್ವಯಂಭು ವಿಶ್ವೇಶ್ವರದೇವ ದೇವಾಲಯದ ಆಚಾರ್ಯನಾದ ವಿದ್ಯಾಕಿನಿ ಪಂಡಿತದೇವನಿಗೆ ಭೂಮಿಯನ್ನು ದತ್ತಿಯನ್ನಾಗಿ ನೀಡಿದ್ದನು ಎಂದು ತಿಳಿದುಬರುತ್ತದೆ.

ಕ್ರಿ.ಶ. ೧೧೪೭ ರ ತೆಲಸಂಗ ಶಾಸನವೊಂದರಲ್ಲಿ ಬ್ರಾಹ್ಮಣರಿಗೆ ಮಹಾರಾಜರೆಂದು ಕರೆಯಲಾಗಿದೆ. ಈ ರೀತಿ ಬ್ರಾಹ್ಮಣರು ಸಮಾಜದಲ್ಲಿ ಉಚ್ಚ ಸ್ಥಾನ ಹೊಂದಿದ್ದರು. ಪ್ರಸ್ತುತ ಅಥಣಿ ಪ್ರದೇಶದಲ್ಲಿ ಬ್ರಾಹ್ಮಣರು ಹೆಚ್ಚಿನ ಪ್ರಮಾಣದಲ್ಲಿದ್ದರೆಂದು ಶಾಸನಾಧಾರಗಳಿಂದ ತಿಳಿದುಬರುತ್ತದೆ.

ಕ್ಷತ್ರಿಯರು

ಸಮಾಜದಲ್ಲಿ ಕ್ಷತ್ರಿಯರು ಎರಡನೆಯ ಸ್ಥಾನವನ್ನು ಪಡೆದುಕೊಂಡಿದ್ದರು. ಇವರ ವೃತ್ತಿ ಏನೆಂದರೆ, ರಾಜ್ಯದ ಆಡಳಿತವನ್ನು ನೋಡಿಕೊಳ್ಳುವುದು. ಸಾಮ್ರಾಜ್ಯದ ಮೇರೆಯನ್ನು ವೃದ್ಧಿಸುವುದು, ನ್ಯಾಯಪರಿಪಾಲನೆ ಮಾಡುವುದು, ಪ್ರಜೆಗಳ ಕಲ್ಯಾಣಕ್ಕಾಗಿ ಸಾರ್ವಜನಿಕ ಚಟುವಟಿಕೆಗಳನ್ನು ಕೈಕೊಳ್ಳುವುದು, ಸಮ್ರಾಜ್ಯದ ರಕ್ಷಣೆಗಾಗಿ ತಮ್ಮ ಪ್ರಾಣವನ್ನು ಪಣಕ್ಕಿಟ್ಟು ಹೋರಾಡುವುದು, ಸತ್ತರೆ ಸ್ವರ್ಗ ಗೆದ್ದರೆ ರಾಜ್ಯ ಎಂಬ ವೀರ ಉಕ್ತಿಯಂತೆ ನಡೆಯುವವರೇ ಕ್ಷತ್ರಿಯರು. ಯುದ್ಧದಲ್ಲಿ ಬ್ರಾಹ್ಮಣರೂ ಸೇರಿದಂತೆ ಎಲ್ಲರೂ ಪಾಲ್ಗೊಳ್ಳುತ್ತಿದ್ದರಾದರೂ ಕ್ಷತ್ರಿಯರೇ ಅಂದಿನ ಸೇನೆಗಳ ಬೆನ್ನೆಲುಬು ಆಗಿದ್ದರೆಂದು ತಿಳಿಯಲಾಗಿದೆ.

## ವೈಶ್ಯರು

ವೈಶ್ಯರು ಸಮಾಜದಲ್ಲಿ ತೃತೀಯ ವರ್ಗಕ್ಕೆ ಸೇರಿದವರಾಗಿದ್ದರು. ಪ್ರಸ್ತುತ ಅಧ್ಯಯನ ಅಥಣಿ ಪ್ರದೇಶದ ಶಾಸನಗಳಲ್ಲಿ ಇವರನ್ನು ಪೆಟ್ಟಿಗಳು, ಬಣಜಿಗ ಸೆಟ್ಟಿ ಮತ್ತು ನಖರರು, ವ್ಯಾಪಾರಿಗಳು ಎಂದು ಕರೆಯುತ್ತಿದ್ದರು.

## ಶೂದ್ರರು

ಶೂದ್ರರು ಸಮಾಜದಲ್ಲಿ ನಾಲ್ಕನೆಯ ವರ್ಗಕ್ಕೆ ಸೇರಿದವರಾಗಿದ್ದರು. ವರ್ಗಗಳಲ್ಲಿಯೇ ಶ್ರೇಷ್ಠವಾದುದೆಂದು ಕರೆಯಿಸಿಕೊಳ್ಳುವ ಬ್ರಾಹ್ಮಣ ವರ್ಗ ಸಾಮ್ರಾಜ್ಯದ ಸೂತ್ರವನ್ನೇ ಕೈಯಲ್ಲಿ ಹಿಡಿದು ತಮ್ಮನ್ನು ಕ್ಷತ್ರಿಯರೆಂದು ಕರೆದುಕೊಳ್ಳುತ್ತಿದ್ದ ಆಳ್ವಿಕೆಯ ವರ್ಗ ಮತ್ತು ವೈಶ್ಯರೆಂದು ತಮ್ಮನ್ನು ಕರೆದುಕೊಳ್ಳುತ್ತಿದ್ದ ವರ್ತಕವರ್ಗಗಳನ್ನು ಬಿಟ್ಟರೆ ಉಳಿದ ನೂರಾರು ಜಾತಿಗಳನ್ನು, ಉದಾ: ಶಿಲ್ಪಿಗಳು, ಅಕ್ಕಸಾಲಿಗರು, ಕುಂಬಾರರು, ಬಡಿಗ, ಕಮ್ಮಾರ, ನೇಕಾರ, ಚಮ್ಮಾರ ಮುಂತಾದವರನ್ನು ಶೂದ್ರ ಎಂಬ ಸಾಮಾನ್ಯ ವಾಚಕದಿಂದ ಕರೆಯುತ್ತಿದ್ದರು. ಅಥಣಿ ಪ್ರದೇಶದ ಕ್ರಿ.ಶ. ೧೨೨೫ ರ ಯಂಕಚ್ಚಿ ಶಾಸನವೊಂದರಲ್ಲಿ ಬಡಿಗ ಚಂಪೋಜ ಎಂಬ ಉಲ್ಲೇಖ ಬಂದಿದೆ. ಪ್ರಾಚೀನ ಮಧ್ಯಕಾಲಿನ ಕರ್ನಾಟಕವು ಸೇರಿದಂತೆ ಪ್ರಸ್ತುತ ಅಧ್ಯಯನ ಅಥಣಿ ಪ್ರದೇಶದಲ್ಲಿ ಶೂದ್ರರು ಇರದಿದ್ದರೆ ಬೇಸಾಯ ಕೃಷಿಯ ಬೆಳವಣಿಗೆಯೂ ಕುಂಠಿತಗೊಳ್ಳುತ್ತಿತ್ತು. ಈ ಶೂದ್ರರು ಶ್ರಮಜೀವಿಗಳಾಗಿದ್ದರು. ಈ ಪ್ರದೇಶದಲ್ಲಿ ಶೂದ್ರರ ಪಾತ್ರ ಪ್ರಮುಖವಾಗಿತ್ತು.

## ಉದ್ಯೋಗ ಆಧಾರಿತ ಇತರ ಜಾತಿಗಳು

ಭಾರತದಲ್ಲಿ ಈ ಜಾತಿ ವ್ಯವಸ್ಥೆಯ ಮೂಲ ಬಹು ಪ್ರಾಚೀನವಾದದ್ದಾಗಿದೆ. ವರ್ಣದಿಂದ ಬೇರೆ ಬೇರೆ ಜಾತಿಗಳು ಹುಟ್ಟಿದವು. ಎಂದು ಮನು ಅಭಿಪ್ರಾಯಪಟ್ಟಿದ್ದಾನೆ. ಈ ಮೊದಲೇ ಮೇಲೆ ಹೆಸರಿಸಿದಂತೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ವರ್ಣಗಳು ಕ್ರಮೇಣ ವಿಭಾಗಗೊಂಡು ಅನೇಕ ಜಾತಿ -ಉಪಜಾತಿಗಳಾಗಿ ಮಾರ್ಪಾಡುಗೊಂಡವು.

ಪ್ರಾಚೀನ ಮಧ್ಯಕಾಲೀನ ಕರ್ನಾಟಕದಲ್ಲಿ ಒಟ್ಟು ೧೮ ಜಾತಿಗಳು ಪ್ರಚಲಿತವಿದ್ದು ವಿಷಯ ಕಾವ್ಯ ಶಾಸನಗಳಲ್ಲಿ ಉಕ್ತವಾಗಿದೆ. ಇದನ್ನು ಕುಲ ಹದಿನೆಂಟು ಜಾತಿಗಳೆಂದು ಕರೆಯುತ್ತಿದ್ದುದು ವಾಡಿಕೆಯಾಗಿದೆ. ಪ್ರಾಚೀನ ಕಾಲದ ಅಥಣಿ ಪ್ರದೇಶದ ಸಾಮಾಜಿಕ ವ್ಯವಸ್ಥೆಯಲ್ಲಿ ವೃತ್ತಿ ಆಧಾರಿತ ಅನೇಕ ಜಾತಿಗಳಿದ್ದುದು ಶಾಸನಾಧಾರಗಳಿಂದ ತಿಳಿದುಬರುತ್ತದೆ.

## ಸ್ತ್ರೀಯರ ಸ್ಥಾನಮಾನ

ಸ್ತ್ರೀಗೆ ಭಾರತ ದೇಶದಲ್ಲಿ ಪೂಜ್ಯನೀಯವಾದ ಸ್ಥಾನವನ್ನು ಕೊಟ್ಟಿದ್ದಾರೆ. ಪ್ರಾಚೀನ ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ವ್ಯವಸ್ಥೆಯಲ್ಲಿ ಸ್ತ್ರೀಗೆ ಸಾಕಷ್ಟು ಸ್ವಾತಂತ್ರ್ಯ ಹಾಗೂ ಸಮಾನ ಗೌರವಗಳು ದೊರೆಯುತ್ತಿದ್ದವು. ಹೆಣ್ಣು ಬಾಲ್ಯಾವಸ್ಥೆಯಲ್ಲಿ ತಂದೆ-ತಾಯಿಯರ ಆಶ್ರಯದಲ್ಲಿ ಮದುವೆಯಾಗಿ ಗಂಡನ

ಆಶ್ರಯದಲ್ಲಿ ವೃದ್ಧಾಪ್ಯದಲ್ಲಿ ಮಕ್ಕಳ ಆಶ್ರಯದಲ್ಲಿರುವಳು. ಕರ್ನಾಟಕವನ್ನಾಳಿದ ಚಾಲುಕ್ಯರ ಹಾಗೂ ರಾಷ್ಟ್ರಕೂಟರ ಕಾಲದಲ್ಲಿ ಭಾರತದ ಇತರ ಹಲವಾರು ಪ್ರಾಂತಗಳಿಗಿಂತಲೂ ಹೆಚ್ಚಾಗಿ ಕರ್ನಾಟಕದಲ್ಲಿ ಸ್ತ್ರೀಯರ ಸ್ಥಾನಮಾನಗಳು ಉತ್ತಮವಾಗಿದ್ದವು. ರಾಣಿವಾಸದ ಸ್ತ್ರೀಯರಂತೂ ಸಕಲ ಕಲಾವಲ್ಲಭೆಯರಾಗಿ ಮೆರೆದರು. ಕೆಲವು ರಾಣೀಯರು ಆಡಳಿತ ಕ್ಷೇತ್ರದಲ್ಲಿ ಮಿಂಚಿದ್ದಾರೆ.

ಪ್ರಸ್ತುತ ಅಥಣಿ ಪ್ರದೇಶಗಳ ಶಾಸನಗಳಿಂದ ಕೆಲ ರಾಜಧಾನಿ ಸ್ತ್ರೀಯರ ಬಗ್ಗೆ ಹೆಚ್ಚಿನ ವಿವರಗಳು ಲಭಿಸುತ್ತವೆಯೇ ಹೊರತು ಅಂದಿನ ಸಮಾಜದಲ್ಲಿನ ಸಾಮಾನ್ಯ ಮಹಿಳೆಯರ ಸ್ಥಾನಮಾನವೇನೆಂಬುದು ತಿಳಿದುಬರುವುದಿಲ್ಲ. ಪ್ರಾಚೀನ ಕರ್ನಾಟಕದಲ್ಲಿ ಸ್ತ್ರೀಯರು ರಾಜಕೀಯ ಕ್ಷೇತ್ರದಲ್ಲಿ ಗಣನೀಯವಾದ ಸೇವೆಯನ್ನು ಸಲ್ಲಿಸಿದ್ದಾರೆ. ಕರ್ನಾಟಕವನ್ನಾಳಿದ ಅರಸುಮನೆತನಗಳು ಅದರಲ್ಲಿ ಪ್ರಸ್ತುತ ಅಥಣಿ ಪ್ರದೇಶವನ್ನಾಳಿದ ಅರಸುಮನೆತನಗಳಾದ ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ದೇವಗಿರಿ ಯಾದವರು, ಹಾಗೂ ಶಿಲಾಹಾರ ಮನೆತನಗಳ ಸ್ತ್ರೀಯರು ದೇವಾಲಯಗಳಿಗೆ ದಾನ ಕೊಡುವುದರಲ್ಲಿ ಮತ್ತು ಆಡಳಿತ ಕ್ಷೇತ್ರದಲ್ಲಿ ಭಾಗವಹಿಸುತ್ತಿದ್ದರು. ಕ್ರಿ.ಶ. ೧೧೫೮ರ ಬಳ್ಳಿಗೇರಿ ಶಾಸನವೊಂದರಲ್ಲಿ ಎರಡನೆಯ ಬಿಜ್ಜಳನ ಕಿರಿಯ ಸಹೋದರ ಮೈಲುಗಿಯು ತನ್ನ ಹೆಂಡತಿ ಲಕ್ಷ್ಮಿದೇವಿಯೊಂದಿಗೆ ಬೆಳ್ವಲ -೩೦೦ ಪ್ರದೇಶದ ಆಳ್ವಿಕೆ ನಡೆಸುತ್ತಿದ್ದರು.

## ವಿವಾಹ ಪದ್ಧತಿ

ವಿವಾಹ ಸಂಬಂಧಕ್ಕೆ ಪ್ರಾಚೀನ ಕಾಲದಿಂದಲೂ ಅತ್ಯಂತ ಗೌರವದ ಸ್ಥಾನವಿದೆ. ಶಾಸನಗಳ ಆಧಾರದ ಮೇಲೆ ಈ ಪ್ರಾಂತದಲ್ಲಿ ವೈವಾಹಿಕ ಸಂಬಂಧವು ಸಮಾನ ಅಂತಸ್ತಿನವರೊಡನೆ ನಡೆಯುತ್ತಿತ್ತು. ಕೈಕೆಯರ ರಾಜಕುಮಾರಿ ಪ್ರಭಾವತಿದೇವಿಯನ್ನು ಕದಂಬ ದೊರೆ ಮೃಗೇಶವರ್ಮನಿಗೆ ಕೊಟ್ಟು ಮದುವೆ ಮಾಡಲಾಯಿತು. ಕರ್ನಾಟಕಕ್ಕೆ ಭೇಟಿ ನೀಡಿದ ಅಲ್ಬೆರೂನಿಯ ವರದಿಯ ಆಧಾರದ ಮೇಲೆ ಈ ಪ್ರಾಂತದಲ್ಲಿ ಬಾಲ್ಯವಿವಾಹ ರೂಢಿಯಲ್ಲಿತ್ತು. ಹೀಗೆ ಮೇಲಿನ ರೀತಿಯ ವಿವಾಹ ಪದ್ಧತಿ ಈ ಪ್ರಾಂತದಲ್ಲಿ ಅಸ್ತಿತ್ವದಲ್ಲಿತ್ತು ಎಂದು ಹೇಳಬಹುದು.

## ಬಹುಪತ್ನಿತ್ವ

ಬಹುಪತ್ನಿತ್ವಕ್ಕೆ ಪ್ರಾಚೀನ ಕಾಲದಲ್ಲಿ ಸಾಮಾಜಿಕ ಮನ್ನಣೆಯಿದ್ದಿತು. ಈ ಪದ್ಧತಿಯು ಹೆಚ್ಚಾಗಿ ಅರಸರಲ್ಲಿ, ಅಧಿಕಾರಿಗಳಲ್ಲಿ ಅಧಿಕ ಪ್ರಮಾಣದಲ್ಲಿ ಕಂಡುಬಂದಿರುತ್ತದೆ. ಸಾಮಾನ್ಯರಲ್ಲಿ ವಿರಳವಾಗಿ ಕಂಡುಬರುತ್ತದೆ. ಪ್ರಸ್ತುತ ಅಥಣಿ ಪ್ರದೇಶದಲ್ಲಿ ಬಹುಪತ್ನಿತ್ವ ಪದ್ಧತಿ ರೂಢಿಯಲ್ಲಿತ್ತು ಎಂಬುದನ್ನು ಅನೇಕ ಶಾಸನಗಳು ಸ್ಪಷ್ಟಪಡಿಸುತ್ತವೆ.

ಕ್ರಿ.ಶ. ೧೧೯೨ ರ ಐನಾಪೂರ ಶಾಸನವು ನಾಗೋಜಿಯ ಮಗನಾದ ಯಲ್ಲೋಜಿಗೆ ಇಬ್ಬರು ಹೆಂಡಂದಿರಿದ್ದರು ಎಂದು ಉಲ್ಲೇಖಿಸುತ್ತದೆ. ಕ್ರಿ.ಶ. ೧೧೧೫ ರಾಮೇಶ್ವರ ಶಾಸನದಲ್ಲಿ ಆರನೆಯ ವಿಕ್ರಮಾದಿತ್ಯನ ಪಟ್ಟದ ರಾಣಿಯಾದ ಮಹಾದೇವಿಯ ಬಗ್ಗೆ ಉಲ್ಲೇಖಿಸಿದೆ. ವಿಕ್ರಮಾದಿತ್ಯನಿಗೆ ೧೬ ಜನ ರಾಣಿಯರಿದ್ದರು. ಅವರ ಕೈಗೂ ಆಡಳಿತದ ಕಡಿವಾಣ ಕೊಟ್ಟಿದ್ದನು.

## ವೇಶ್ಯಾವೃತ್ತಿ

ವೇಶ್ಯಾವೃತ್ತಿಯೂ ಭಾರತದಲ್ಲಿ ಪ್ರಾಚೀನ ಕಾಲದಲ್ಲಿಯೇ ಜಾರಿಯಲ್ಲಿತ್ತು. ವಿದ್ವಾಂಸರು ಇವರಿಗೆ ಗಣಕೆಯರೆಂದು ಋಗ್ವೇದದಲ್ಲಿಯೇ ಕಂಡಿದ್ದಾರೆ. ವೇಶ್ಯಾವೃತ್ತಿಯನ್ನು ಕುರಿತು ಗೌತಮ, ಮನು, ನಾರದ, ಮತ್ಸ್ಯಪುರಾಣ ಮುಂತಾದ ಪ್ರಾಚೀನ ಕೃತಿಗಳು ಪ್ರಸ್ತಾಪಿಸುವುದರಿಂದ ಅದರ ಕಾಲಮಾನ ವ್ಯಾಪ್ತಿಯನ್ನು ಗುರುತಿಸಬಹುದು. ಕರ್ನಾಟಕದಲ್ಲಿ ಕ್ರಿ.ಶ. ೬ ರಿಂದ ೯ ನೇ ಶತಮಾನದಲ್ಲಿ ಸೂಳೆ ಪದದ ಪರ್ಯಾಯ ಶಬ್ದಗಳಾಗಿ ಪೊಡ್ಡಿ, ಪೋಟ್ಟಿ, ಬೊಡ್ಡಿಗಳ ಪದಗಳ ಬಳಕೆಯಾಗಿವೆ.[೨] ಪ್ರಾಚೀನ ಕರ್ನಾಟಕದ ಶಾಸನಗಳು ವೇಶ್ಯಾವೃತ್ತಿಯನ್ನು ಅವಲಂಬಿಸಿದ ದೇವದಾಸಿಯರನ್ನು ಗೌರವದಿಂದ ಕಂಡಿವೆ. ಸಾಮಾನ್ಯವಾಗಿ ಇವರು ಗೀತ, ನರ್ತನ, ಮುಂತಾದ ಕಲೆಗಳಲ್ಲಿ ಪರಿಣಿತರಾಗಿದ್ದರು. ಪ್ರಾಚೀನ ಮಧ್ಯಕಾಲೀನ ಅವಧಿಯಲ್ಲಿ ಇವರು ಸಾಮಾಜಿಕವಾಗಿ, ಆರ್ಥಿಕವಾಗಿ ಉನ್ನತ ಸ್ಥಾನ ಪಡೆದಿದ್ದರು. ದೇವಾಲಯದಲ್ಲಿ ಅಂಗಭೋಗ, ರಂಗಭೋಗ ಸೇವೆ ಹೆಚ್ಚಿದಂತೆಲ್ಲ ದೇವಾಲಯದ ಸೇವೆಗೆ ನಿಂತ (ಬಿಟ್ಟ) ಹೆಣ್ಣುಗಳನ್ನು ಶಾಸನಗಳು ಸೂಳೆಯರೆಂದು ಕರೆದಿವೆ. ಇವರು ಮದುವೆಯಾಗದೇ ಸಾಮಾನ್ಯ ವೇಶ್ಯಯರಿಗಿಂತ ಭಿನ್ನವಾಗಿ ತಮ್ಮದೇ ಆದ ಒಂದು ಬಗೆಯ ಸಾಮಾಜಿಕ ನಿಯಮ ಪಾಲಿಸಿಕೊಂಡು ಬರುತ್ತಿದ್ದರೆಂದು ತೋರುತ್ತದೆ. ಸಾಮಾನ್ಯವಾಗಿ ಅಂದಿನ ವೇಶ್ಯಾ ಸ್ತ್ರೀಯರು ಸಂಗೀತ ನೃತ್ಯಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಇಂತಹ ಮನರಂಜನಾ ಚಟುವಟಿಕೆಗಳು ದೇವಾಲಯಗಳಲ್ಲಿ ನಡೆದುಬರುತ್ತಿದ್ದುದು ಗಮನಾರ್ಹವಾದ ವಿಷಯವಾಗಿದೆ.

ಪ್ರಸ್ತುತ ಅಥಣಿ ಪ್ರದೇಶದ ಶಾಸನಗಳಲ್ಲಿ ವೇಶ್ಯೆಯರ ಬಗ್ಗೆ ಉಲ್ಲೇಖ ದೊರೆತಿಲ್ಲ, ಇತ್ತೀಚಿಗೆ ನಾವು ಕ್ಷೇತ್ರಕಾರ್ಯವನ್ನು ಕೈಕೊಂಡಾಗ ವೇಶ್ಯೆಯರು ಇನ್ನೂ ಕೆಲವು ಗ್ರಾಮಗಳಲ್ಲಿರುವುದು ಕಂಡುಬಂದಿರುತ್ತದೆ. ವೇಶ್ಯೆಯರ ಮಕ್ಕಳಿಗಾಗಿ ಮಲಾಬಾದನಲ್ಲಿ ದೇವದಾಸಿ ವಿಮೋಚನಾ ಸಂಸ್ಥೆಯನ್ನು ತೆರೆದು ಅವರ ಮಕ್ಕಳಿಗೆ ವಿದ್ಯಾಭ್ಯಾಸವನ್ನು ಕೊಡುತ್ತಿರುವುದು ಕಂಡುಬಂದಿದೆ.

## ಸಮಾಜದಲ್ಲಿ ಕಂಡುಬರುವ ಇತರ ಅಂಶಗಳು

ಆಹಾರ ಪಾನೀಯಗಳು : ಪ್ರಾಚೀನ ಮಧ್ಯಕಾಲೀನ ಅಥಣಿ ಪ್ರದೇಶದ ಸಮಾಜಿಕ ವ್ಯವಸ್ಥೆಯಲ್ಲಿ ಅಂದಿನ ಜನತೆಯು ಸೇವಿಸುತ್ತಿರುವ ಆಹಾರ ಪಾನೀಯಗಳ ಕುರಿತು ಅಥಣಿ ಪ್ರದೇಶದ ಯಾವ ಶಾಸನದಲ್ಲಿ ಉಲ್ಲೇಖವಿರದಿದ್ದರೂ ಕ್ರಿ.ಶ.೧೧೮೯ ರ ಕೊಕಟನೂರು ಶಾಸನವೊಂದರಲ್ಲಿ ದೇವಾಲಯ ಮತ್ತು ಮಠದಲ್ಲಿದ್ದ ಋಷಿಗಳಿಗೆ, ವಿದ್ಯಾರ್ಥಿಗಳಿಗೆ ಅನ್ನ ದಾಸೋಹ ಮಾಡುತ್ತಿದ್ದರು ಎಂಬುದು ಉಲ್ಲೇಖವಾಗಿದೆ. ಇದರಿಂದ ತಿಳಿದುಬರುವುದೇನೆಂದರೆ ಅಂದಿನ ಜನತೆಯು ಸೇವಿಸುತ್ತಿರುವ ಮುಖ್ಯ ಆಹಾರವೇಂದರೆ, ದರೆ, ಧಾನ್ಯ ಹಾಗೂ ಹೈನು ಪದಾರ್ಥಗಳಾಗಿದ್ದವು. ಬಹುಪಾಲು ಜನ ಸಸ್ಯಾಹಾರಿಗಳಾಗಿದ್ದರು. ಇವು ಆಗಿನ ಜನರ ದಿನನಿತ್ಯದ ಆಹಾರ ಪಾನೀಯಗಳಾಗಿದ್ದವು.

## ಉಡುಗೆ ಮತ್ತು ಆಭರಣಗಳು

ಅಥಣಿ ಪ್ರದೇಶ ಪ್ರಾಚೀನ ಮಧ್ಯಕಾಲೀನ ಸಾಮಾಜಿಕ ವ್ಯವಸ್ಥೆಯಲ್ಲಿ ಅಂದಿನ ಕಾಲದ ಜನತೆಯ ಉಡುಗೆ -ತೊಡಿಗೆಗಳ ಬಗ್ಗೆ ಶಾಸನಗಳು ಸ್ಪಷ್ಟವಾದ ಮಾಹಿತಿಯನ್ನು ನೀಡದಿದ್ದರೂ ಅಂದಿನ ಸ್ತ್ರೀಯರು

ಚಿನ್ನದಾಭರಣಗಳು ಹಾಗೂ ಸೀರೆಯನ್ನು ತೊಡುತ್ತಿದ್ದ ಬಗ್ಗೆ ಉಲ್ಲೇಖ ದೊರೆತಿವೆ. ಉದಾಹರಣೆಗೆ ಕ್ರಿ.ಶ.೧೧೪೭ ರ ತೆಲಸಂಗ ಶಾಸನವೊಂದರಲ್ಲಿ ಚಿನ್ನದ ಅಂಗಡಿಯವರು ಬ್ರಾಹ್ಮಣರ ಸಂಬಳಕ್ಕಾಗಿ ಚಿನ್ನವನ್ನು ಕೊಡುತ್ತಿದ್ದರು. ಮತ್ತು ಸೀರೆ ವ್ಯಾಪಾರಸ್ಥರು ಪ್ರತಿವರ್ಷ ಬ್ರಾಹ್ಮಣ ಸ್ತ್ರೀಗೆ ಸೀರೆಯನ್ನು ಕೊಡಬೇಕಾಗುತ್ತಿತ್ತು. ತೆಲಸಂಗದಲ್ಲಿ ದೊರೆತ ಶಾಸನಾಧಾರದಿಂದ ತಿಳಿಯುವ ವಿಷಯವೇನೆಂದರೆ, ಅಂದಿನ ಕಾಲದ ಜನತೆಯು ಒಳ್ಳೆಯ ಉಡುಪು ಹಾಗೂ ಸ್ತ್ರೀಯರು ಚಿನ್ನದ ಆಭರಣಗಳನ್ನು ಧರಿಸುತ್ತಿದ್ದರೆಂದು ಕಂಡುಬರುತ್ತದೆ.

## ಜಾತ್ರೆ - ಉತ್ಸವಗಳು ಮತ್ತು ಹಬ್ಬಗಳು

ಜಾತ್ರೆ ಮತ್ತು ಹಬ್ಬಗಳು ಮುಖ್ಯವಾದ ಸಾಮಾಜಿಕ ಕಾರ್ಯಗಳಾಗಿದ್ದವು. ಧಾರ್ಮಿಕ ಆಚರಣೆಗಳು ತುಂಬಿದ ಈ ಕನ್ನಡ ನಾಡಿನಲ್ಲಿ ಇಂತಹ ಚಟುವಟಿಕೆಗಳು ಬಹಳ ಹಿತವಾಗಿದ್ದವು. ಕೃಷಿಯ ನಾಡಾದ ಕರ್ನಾಟಕದಲ್ಲಿ ಜಾತ್ರೆಗಳನ್ನು ನಡೆಸುವುದು ಒಂದು ಗೊತ್ತಾದ ವಾರ್ಷಿಕ ಕಾರ್ಯಕ್ರಮ. ವಸ್ತುಗಳನ್ನು ಕೊಳ್ಳಲು ತಮ್ಮಲ್ಲಿರುವ ವಸ್ತುಗಳನ್ನು ಮಾರಲು ಸದವಕಾಶ. ಮನರಂಜನೆಯ ಮೂಲ ಎರಡು ಆಗಿರುತ್ತಿದ್ದವು. ಅವು ಇಂದಿಗೂ ಇಂತಹ ಜಾತ್ರೆಗಳಲ್ಲಿ ದನಕರುಗಳ ಮಾರಾಟ ಪ್ರಧಾನವಾಗಿರುತ್ತದೆ.[೬] ಈ ಜಾತ್ರೆ ಉತ್ಸವಗಳ ಆಚರಣೆಯೂ ಸಾವಿರಾರು ವರ್ಷಗಳಿಂದ ಜನಾಂಗದ ನಡೆದುಬಂದ ಜನವಾಹಿನಿಯ ಪ್ರತೀಕ. ಇದು ಸಾಂಸ್ಕೃತಿಕ ಅವಿಭಾಜ್ಯ ಅಂಗವಾಗಿರುತ್ತದೆ. ಈ ಜಾತ್ರೆ -ಉತ್ಸವಗಳ ಉಲ್ಲೇಖ ಪ್ರಸ್ತುತ ಅಧ್ಯಯನ ಶಾಸನಗಳಲ್ಲಿ ಕಂಡುಬರದಿದ್ದರೂ ಸಹ ಅಥಣಿ ಪ್ರದೇಶದಲ್ಲಿ ಜಾತ್ರೆಯು ಜರುಗುತ್ತವೆ. ಅಥಣಿ ಸಿದ್ದೇಶ್ವರ ಜಾತ್ರೆಯು ತಾಲೂಕಿನಲ್ಲಿಯೇ ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ದೂರದ ಕಡೆಯಿಂದ ಜನರು ಬಂದು ಸೇರುತ್ತಾರೆ. ಸತ್ತಿ ಗ್ರಾಮದ ಬುರಾನಸಾಹೇಬರ ಉತ್ಸವ ಪ್ರತಿವರ್ಷ ಬಕ್ರಿದ ಹಬ್ಬದ ಮರುದಿನ ಉತ್ಸವ ಜರುಗುತ್ತದೆ. ಸುಮಾರು ೧೦,೦೦೦ ಜನಸಂಖ್ಯೆ ಕೂಡುತ್ತದೆ. ಹುಲಗಬಾಳಿ ಬೀರಸಿದ್ದೇಶ್ವರ ಜಾತ್ರೆ ಇಲ್ಲಿ ನಾಲ್ಕು ಊರಿನಿಂದ ದೇವರ ಪಲ್ಲಕ್ಕಿ ಬಂದು ಸೇರುತ್ತವೆ. ಪ್ರತಿವರ್ಷ ದೀಪಾವಳಿ ದಿನ ಸ್ನಾನಕ್ಕಾಗಿ ಈ ಗ್ರಾಮದ ನದಿಗೆ ಬರುತ್ತವೆ. ಮುರಗುಂಡಿ, ಅಥಣಿ, ಹಲ್ಯಾಳ, ಹುಲಗಬಾಳ ಜಾತ್ರೆಗೆ ದೂರದ ಊರಿನಿಂದ ಜನರು ಬರುತ್ತಾರೆ.

## ಹಬ್ಬಗಳು

ಸಂಸ್ಕೃತ ಪರ್ವ ಎಂಬ ಪದವು ಕನ್ನಡದಲ್ಲಿ ಹಬ್ಬವೆಂದು ರೂಪುಗೊಂಡಿದೆ ಪರ್ವಗಳಲ್ಲಿ ಪಂಚಪರ್ವಗಳೆಂಬುವಿದ್ದು, ಡಾ. ಚಿದಾನಂದಮೂರ್ತಿಯವರು ಅಂದು ದೇವಾಲಯಗಳಲ್ಲಿ ನಡೆಯುತ್ತಿದ್ದ ಎರಡು ಪೂಜಾ ಉತ್ಸವಾದಿಗಳಾದ ಚೈತ್ರ ಮತ್ತು ಪವಿತ್ರಗಳ ಜೊತೆಗೆ ಮಂತ್ರಪುಷ್ಪವನಾರೋಹಣ ಫಲಪೂಜೆ, ಕಾರ್ತಿಕ ಕೃತ್ತಿಕಾ, ದೀಪಪೂಜೆ ಮತ್ತು ವಸಂತೋತ್ಸವಗಳು ಸೇರಿ ಐದು ಹಬ್ಬಗಳೆಂದು ಹೇಳಿರುವುದನ್ನು ಎಸ್.ಕೆ. ಕೊಪ್ಪ ಅವರು ಒಪ್ಪಿದ್ದಾರೆ. ಡಾ॥ ಬೆಟಗೇರಿ ಕೃಷ್ಣಶರ್ಮರು ಹೇಳುವ ಒಂದು ವರ್ಷದ ಅವಧಿಯಲ್ಲಿ ಬರುವ ಹನ್ನೆರಡು ಹುಣ್ಣಿಮೆ ಅಮಾವಾಸ್ಯೆ ಮತ್ತು ಸಂಕ್ರಮಣಗಳ ಜೊತೆಗೆ ಪ್ರತಿಪಕ್ಷದಲ್ಲಿಯೂ ಬರುವ ಹನ್ನೆರಡು ಹುಣ್ಣಿಮೆ ಅಮವಾಸ್ಯೆ ಮತ್ತು ಸಂಕ್ರಮಣಗಳ ಜೊತೆಗೆ ಪ್ರತಿಪಕ್ಷದಲ್ಲಿಯೂ ಬರುವ ಅಷ್ಟಮಿ, ಚತುರ್ದಶಿ ತಿಥಿಗಳೆರಡನ್ನು ಸೇರಿಸಿ ಪಂಚಪರ್ವಗಳೆಂದು ಕರೆದಿರುವುದರ

ಕಡೆಗೆ ಹೆಚ್ಚು ಒತ್ತನ್ನು ನೀಡಿದ್ದಾರೆ.

ಹಬ್ಬಗಳು ಧಾರ್ಮಿಕ ಹಾಗೂ ಲೌಕಿಕ ವ್ಯವಹಾರಗಳು ಅನೇಕ ದೇವದೇವತೆಗಳಿಂದ ಕೂಡಿ ಅನೇಕ ವರ್ಗ, ಪಂಥ, ಪಂಗಡಗಳಿಂದ ಕೂಡಿ ನಮ್ಮ ನಾಡಿನ ಪಂಚಾಂಗದಲ್ಲಿ ಅಸಂಖ್ಯಾತ ಹಬ್ಬ ಹರಿದಿನಗಳು ಹೆಚ್ಚು ಕಡಿಮೆ ಪ್ರತಿಯೊಂದು ದಿನವೂ ಏನಾದರೂ ಒಂದು ಹಬ್ಬ ಇರುತ್ತದೆ. ಈ ಹಬ್ಬಗಳ ಜೊತೆಗೆ ಸಾಮಾಜಿಕ ಆರ್ಥಿಕ ಅಗತ್ಯಗಳನ್ನು ಪೂರೈಸುವ ಅವಕಾಶವು ಸೇರಿಕೊಂಡು ಹಬ್ಬಗಳು ರೂಪುಗೊಂಡವು. ಹಬ್ಬಗಳನ್ನು ಆಚರಿಸುವ ಉದ್ದೇಶ ಬಹುಸಂಖ್ಯೆಯ ಜನರು ಒಂದೇ ಸ್ಥಳದಲ್ಲಿ ಸೇರುವುದು, ಸಾಮಾಜಿಕವಾಗಿಯೂ ಪರಿಣಾಮಕಾರಿಯಾಯಿತು.

ಪ್ರಸ್ತುತ ಅಧ್ಯಯನ ಅಥಣಿ ಪ್ರದೇಶದಲ್ಲಿ ಹಬ್ಬಗಳ ಉಲ್ಲೇಖ ಕಂಡುಬಂದಿದೆ. ಉದಾಹರಣೆಗೆ ಕ್ರಿ.ಶ. ೧೧೧೫ ರ ರಾಮತೀರ್ಥ ಶಾಸನವೊಂದರಲ್ಲಿ ಮನ್ಮಥ ಫಾಲ್ಗುಣ ಹುಣ್ಣಿಮೆಯ (ಹೋಳಿಹಬ್ಬ) ಉಲ್ಲೇಖವಿದೆ. ಕ್ರಿ.ಶ. ೧೧೨೨ ರ ತೆಲಸಂಗ ಶಾಸನದಲ್ಲಿ ಉತ್ತರಾಯನ ಸಂಕ್ರಾಂತಿ ಎಂದು ಉಲ್ಲೇಖವಿದೆ. ಕ್ರಿ.ಶ. ೧೧೬೬ ರ ರಾಮತೀರ್ಥ ಶಾಸನವು ವೈಶಾಖ ಭಾದ್ರಪದ ಅಮವಾಸ್ಯೆ ದಿನದಂದು ಈ ಪ್ರದೇಶದಲ್ಲಿ ಸೂರ್ಯಗ್ರಹಣವಾದ ಬಗ್ಗೆ ಉಲ್ಲೇಖಿಸಿದೆ. ಕೊಕಟನೂರಿನ ಕ್ರಿ.ಶ. ೧೧೯೯ ರ ಶಾಸನವು ಶ್ರಾವಣ ಶುಕ್ಲ ವ್ಯಾತಿಪತ ಮತ್ತು ದಕ್ಷಿಣಾಯನ ಸಂಕ್ರಾಂತಿ ಚಂದ್ರಮಾಸದ ಬಗ್ಗೆ ಉಲ್ಲೇಖಿಸಿದೆ. ಫಾಲ್ಗುಣ ಹುಣ್ಣಿಮೆಯು ಚಂದ್ರಗ್ರಹಣವನ್ನು ಮತ್ತು ಭಾದ್ರಪದ ಅಮವಾಸ್ಯೆಯೂ ಸೂರ್ಯಗ್ರಹಣವನ್ನು ಉಲ್ಲೇಖಿಸಿವೆ. ಪ್ರಸ್ತುತ ಅಥಣಿ ಪ್ರದೇಶದ ಶಾಸನಗಳಿಂದ ತಿಳಿಯುವುದೇನೆಂದರೆ ಇಲ್ಲಿ ಹಬ್ಬಗಳ ಆಚರಣೆಯು ಇದ್ದಿತೆಂದು ಸ್ಪಷ್ಟವಾಗಿ ತಿಳಿದುಬರುತ್ತದೆ.

### ಕೆರೆ (ತಟಾಕ) ನಿರ್ಮಾಣ

ಪ್ರಾಚೀನ ಕಾಲದ ಕನ್ನಡಿಗರ ಔದಾರ್ಯ ಮುಖ್ಯವಾಗಿ ಪ್ರಕಟವಾಗಿರುವುದು ಎರಡು ಕಡೆ ಒಂದು ಕೆರೆ ನಿರ್ಮಾಣ ಕಾರ್ಯದಲ್ಲಿ ಮತ್ತೊಂದು ದೇವಾಲಯ ಮಠ ನಿರ್ಮಾಣ ಕಾರ್ಯದಲ್ಲಿ ಬಹುಶ: ಸಾರ್ವಜನಿಕ ಕಾರ್ಯಗಳಲ್ಲೆಲ್ಲಾ ಬಹು ಮುಖ್ಯವಾದುದು ಕೆರೆ ಅಥವಾ ತಟಾಕ ನಿರ್ಮಾಣ.

ಮಹಾಭಾರತ ಕಾವ್ಯವು ಯಾವ ವ್ಯಕ್ತಿಯ ಕಟ್ಟಿಸಿದ ಕೆರೆಯಲ್ಲಿ ಹಸುಗಳು, ಪ್ರಾಣಿಗಳು, ಪಕ್ಷಿಗಳು, ಮನುಷ್ಯರು ನೀರನ್ನು ಕುಡಿದು ತೃಪ್ತರಾಗುವರೋ ಅವರು ಅಶ್ವಮೇಧ ಯಾಗದ ಫಲವನ್ನು ಪಡೆಯುತ್ತಾನೆಂದು ಹೇಳಿದೆ. ಕೆರೆಯ ಉಲ್ಲೇಖವು ಅಥಣಿ ಪ್ರದೇಶದ ಕ್ರಿ.ಶ. ೧೧೨೨ ತೆಲಸಂಗ ಶಾಸನವೊಂದರಲ್ಲಿ ಬಂದಿದೆ. ಅದರಲ್ಲಿರುವ ವಿಷಯ ತೆಲಸಂಗದಲ್ಲಿ ಕಲ್ಲಕೆರೆ ಎಂಬ ಕೆರೆಯನ್ನು ಕಮಕನದ ಕೇತ ನಿರ್ಮಿಸಿದನೆಂದು ತಿಳಿದು ಬರುತ್ತದೆ. ಈ ರೀತಿ ಸಮಾಜ ಕಲ್ಯಾಣ ಕಾರ್ಯಗಳನ್ನು ಔದಾರ್ಯದ ಸಂಕೇತವಾಗಿ ನಿರ್ವಹಿಸುತ್ತಿದ್ದರು.

# ಆರ್ಥಿಕ ವ್ಯವಸ್ಥೆ

ಸಮಾಜದ ಮಹತ್ವದ ಮುಖ್ಯ ಅಂಗವಾದ ಆರ್ಥಿಕ ವ್ಯವಸ್ಥೆ ವಿಶಾಲವಾದ ವ್ಯಾಪ್ತಿಯನ್ನು ಹೊಂದಿ ಚರಿತ್ರೆಯಲ್ಲಿ ಮಹತ್ವದ ಸ್ಥಾನ ಪಡೆದಿದೆ. ಒಂದು ನಾಡಿನ ಪ್ರಗತಿಯು ಅಲ್ಲಿನ ಅರ್ಥ ವ್ಯವಸ್ಥೆಯನ್ನು ಅವಲಂಬಿಸಿರುತ್ತದೆ. ಅರ್ಥವ್ಯವಸ್ಥೆಯಲ್ಲಿ ನೈಸರ್ಗಿಕ ಸಂಪನ್ಮೂಲಗಳ ಹಂಚಿಕೆಯ ಜೊತೆಗೆ ಅವುಗಳನ್ನು ಉಪಯೋಗಿಸುವ ಜನರ ಸಂಘಟನಾ ಮನೋಬಾವ ಪರಿಶ್ರಮ ಅತಿ ಮುಖ್ಯ.

ಅಥಣಿ ಪ್ರದೇಶದಲ್ಲಿ ಆಳ್ವಿಕೆ ಮಾಡಿದ ಕಲ್ಯಾಣಿ ಚಾಲುಕ್ಯರು, ಕಲಚೂರಿಗಳು, ಯಾದವರು, ಶಿಲಾಹಾರರು, ಮರಾಠರು ಅರ್ಥವ್ಯವಸ್ಥೆಗೆ ವಿಶೇಷ ಕೊಡುಗೆ ನೀಡಿದ್ದಾರೆ. ವ್ಯವಸಾಯ, ಪಶುಪಾಲನೆ, ವಾಣಿಜ್ಯ ವ್ಯವಹಾರ, ವರ್ತಕರು, ವರ್ತಕ ಶ್ರೇಣಿಗಳು, ತೂಕ ಮತ್ತು ಅಳತೆ ನಾಣ್ಯಗಳು, ಭೂ ಮಾಪನ, ಆದಾಯ ಇವೆ ಮೊದಲಾದ ಆರ್ಥಿಕ ಅಂಶಗಳನ್ನು ಕುರಿತು ಈ ಪ್ರದೇಶ ಶಾಸನಗಳು ಮಾಹಿತಿ ನೀಡುತ್ತವೆ.

## ವ್ಯವಸಾಯ

ಪ್ರಾಚೀನಕಾಲದಿಂದಲೂ ವ್ಯವಸಾಯ ನಮ್ಮ ನಾಡಿನ ಆರ್ಥಿಕ ವ್ಯವಸ್ಥೆಯ ಬೆನ್ನುಲುಬಾಗಿದ್ದರಿಂದ ಒಕ್ಕಲುತನವೇ ಈ ಪ್ರದೇಶದ ಪ್ರಧಾನ ಉದ್ಯೋಗವಾಗಿತ್ತು. ವ್ಯವಸಾಯಕ್ಕನುಗುಣವಾಗಿ ಭೂಮಿಯನ್ನ ಮಳೆಯನ್ನಾಧರಿಸದಿ ಸಾಗುವಳಿ ಭೂಮಿ ಎಂದು (ದೇವ ಮಾತೃಕ) ನದಿ, ಹಳ್ಳ, ಕೆರೆ, ಬಾವಿಗಳ ನೀರು ಆಶ್ರಿತ (ನದಿಮಾತೃಕ ) ಎಂದು ವಿಂಗಡಿಸಲಾಗಿದೆ. ಬಹು ಜನರ ಜೀವನೋಪಾಯದ ಮುಖ್ಯ ಕಸುಬುಗಳಾದ ಕೃಷಿ, ವ್ಯಾಪಾರ, ಉದ್ಯೋಗ, ನಾಡಿನ ಸಮಸ್ತ ಆದಾಯಕ್ಕೆಲ್ಲ ಮೂಲ ಆಕರಗಳಾಗಿದ್ದವು.

## ನೀರಾವರಿ

ಕೆರೆಯ ಉಲ್ಲೇಖವು ಅಥಣಿ ಪ್ರದೇಶದಲ್ಲಿ ಕ್ರಿ.ಶ. ೧೧೨೭ರ ತೆಲಸಂಗ ಶಾಸನವೊಂದರಲ್ಲಿ ಬಂದಿದೆ.[೭] ಅದರಲ್ಲಿರುವ ವಿಷಯ ತೆಲಸಂಗದಲ್ಲಿ ಕಲ್ಲಕೆರೆ ಎಂಬ ಕೆರೆಯವನ್ನು ಕಮಕನದ ಕೇತ ನಿರ್ಮಿಸಿದನೆಂದು ತಿಳಿದು ಬರುತ್ತದೆ. ಕ್ರಿ.ಶ. ೧೧೫೦ ರ ಕೊಕಟನೂರ ಶಾಸನದಲ್ಲಿ ಕೃಷ್ಣಾ ನದಿ ಉಲ್ಲೇಖ ಬಂದಿದೆ. ಭವಿಷ್ಯ ಈ ಪ್ರದೇಶದ ಜನರು ಕೃಷ್ಣಾನದಿಯ ನೀರನ್ನು ನೀರಾವರಿಗಾಗಿ ಬಳಸಿರಬಹುದು.

## ಬೆಳೆಗಳು

ಅಥಣಿ ಪರಿಸರದ ಮಣ್ಣು ಫಲವತ್ತಾಗಿದ್ದು, ವಿವಿಧ ಬೆಳೆ ಬೆಳೆಯಲು ಅನುಕೂಲರವಾಗಿದೆ. ಕ್ರಿ.ಶ. ೧೧೬೬ ರ ರಾಮತೀರ್ಥ ಶಾಸನವು ಉಮರಾಣಿ ೩೬ ವಲಯದಲ್ಲಿದ್ದ ಸಿಂಧೂರ ಎಂಬ ಹಳ್ಳಿ ಮತ್ತು ಕಟ್ಟೆಯಲ್ಲಿದ್ದ ಭತ್ತದ ಗದ್ದೆಯನ್ನು ತ್ರಿಭೋಗಾಭ್ಯಂತರ ಸಿದ್ದಿ ಎಂಬುವವನ ನಿರ್ದೇಶನದಂತೆ ಸ್ವಯಂಭು ರಾಮೇಶ್ವರ ದೇವಾಲಯದ ಜೀರ್ಣೋದ್ದಾರ ಮತ್ತು ಮುನಿಗಳ ಜೀವನ ನಿರ್ವಹಣೆಗಾಗಿ ಬಿಜ್ಜಳ ದೇವನ ದಾನವಾಗಿ ನೀಡಿದನೆಂದು ಉಲ್ಲೇಖಿಸುತ್ತದೆ.

## ಪಶುಪಾಲನೆ

ಒಕ್ಕಲುತನಕ್ಕೆ ಸಹಕಾರಿಯಾಗುವ ಕ್ರಮವಾಗಿ ಪಶುಪಾಲನೆಯನ್ನು ಪ್ರಾಚೀನ ಕಾಲದಲ್ಲಿ ಕೈಗೊಳ್ಳುವದು ಸಾಮಾನ್ಯವಾಗಿದೆ. ದನ ಕರುಗಳು ಮನುಷ್ಯನ ಆರ್ಥಿಕ ಪರಿಸ್ಥಿತಿಯನ್ನು ಸುದಾರಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸಿವೆ. ಶಾಸನಗಳಲ್ಲಿ ಪ್ರಾಣಿಗಳ ಯಾವುದೇ ಉಲ್ಲೇಖ ಈ ಪ್ರದೇಶದಲ್ಲಿ ಕಂಡು ಬರುವದಿಲ್ಲ. ವ್ಯವಸಾಯಕ್ಕೆ ಬೇಕಾಗುವ ಎತ್ತು, ಎಮ್ಮೆ, ಕೋಣ ಮತ್ತು ಹಸುಗಳನ್ನು ಸಾಕುತ್ತಿದ್ದರೆಂದು ಊಹಿಸಿಬಹದು.

## ಭೂಒಡೆತನ

ಭೂಮಿಯು ಮಾನವನ ಸಂಪತ್ತಿನ ಮೂಲವಾಗಿರುವದರಿಂದ ಆತನಿಗೆ ಅದರ ಒಡೆತನ ಅಗತ್ಯವಾದುದು. ಪ್ರಾಚೀನ ಹಾಗೂ ಮಧ್ಯಕಾಲಿನ ಕುಟುಂಬಗಳ ಎಲ್ಲ ಬೇಡಿಕೆಗಳನ್ನು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಭೂಮಿಯೇ ಪೂರೈಸುತ್ತಿತ್ತು. ಭೂ ಮಾಲಿತ್ವವನ್ನು ಪಡೆಯುವದು ಸಮಾಜದಲ್ಲಿ ಪ್ರತಿಷ್ಠೆಯ ವಿಷಯವಾಗಿತ್ತು.

## ವೃತ್ತಿ ಕೈಗಾರಿಕೆಗಳು

ಪ್ರಾಚೀನ ಹಾಗೂ ಮಧ್ಯಕಾಲಿನ ಅಥಣಿ ಪ್ರದೇಶದಲ್ಲಿ ಪಾರಂಪರಿಕ ವೃತ್ತಿ ಕೈಗಾರಿಕೆ ಅಸ್ತಿತ್ವದಲ್ಲಿ ಮುಖ್ಯವಾಗಿ ಬಡಗಿತನ, ನೇಕಾರಿಕೆ, ತೆಲ್ಲಿಗ, ಚಮ್ಮಾರ, ಮುಂತಾದ ವೃತ್ತಿಗಳು ಜಾರಿಯಲ್ಲಿದ್ದವು.

## ವರ್ತಕರು

ಅಥಣಿ ಪ್ರದೇಶದ ಶಾಸನಾಧಾರಗಳಿಂದ ಇಲ್ಲಿ ವರ್ತಕ ಮತ್ತು ವರ್ತಕ ಸಂಘಗಳ ಬಗ್ಗೆ ಮಾಹಿತಿ ದೊರೆಯುತ್ತದೆ. ಶೆಟ್ಟಿಗಳು, ಬಣಜಿಗ ಶೆಟ್ಟಿಗಳು ಹಾಗೂ ನಖರಂಗಗಳ ಉಲ್ಲೇಖ ಕಂಡು ಬಂದಿದೆ. ಕ್ರಿ.ಶ. ೧೧೪೭ ರ ತೆಲಸಂಗ ಶಾಸನವೊಂದರಲ್ಲಿ ನಖರಂಗಗಳು ವಿಧಿಸುತ್ತಿದ್ದ ತೆರಿಗೆಯ ಬಗ್ಗೆ ಮಾಹಿತಿಯನ್ನು ನೀಡುತ್ತದೆ. ಅಥಣಿ ಪ್ರದೇಶದಲ್ಲಿ ಬಣಜಿಗ, ಬಣಂಜಿಗ ಶೆಟ್ಟಿಗಳು , ನಖರಂಗಗಳು ಪ್ರಮುಖ ವ್ಯಾಪಾರಸ್ಥರಾಗಿದ್ದರೆಂದು ತಿಳಿಯಬಹುದು.

## ವರ್ತಕ ಸಂಘಗಳು

ಪ್ರಾಚೀನ ಹಾಗೂ ಮದ್ಯಕಾಲಿನ ಅಥಣಿ ಪ್ರದೇಶದಲ್ಲಿ ವರ್ತಕ ಸಂಘದ ಉಲ್ಲೇಖವು ಕ್ರಿ.ಸ. ೧೧೪೭ ರ ತೆಲಸಂಗ ಶಾಸನವೊಂದರಲ್ಲಿ ಕಂಡು ಬಂದಿದೆ.[೮] ಇಲ್ಲಿ ೫೦೦ ಜನ ವರ್ತಕರು, ೫೦೦ ಮಹಾಜನ ಇದ್ದರೆಂದು ಕಂಡು ಬರುತ್ತದೆ. ಸಾತಿ, ಸಾಲಿಗ ಪದಗಳು ಬಟ್ಟೆ ನೇಯುವ ವೃತ್ತಿಯ ನೇಕಾರರನ್ನು ಸೂಚಿಸುತ್ತದೆ. ಈ ಪ್ರದೇಶದಲ್ಲಿ ವ್ಯಾಪಕವಾದ ವ್ಯಾಪಾರಿ ಚಟುವಟಿಕೆಗಳನ್ನು ವೃತ್ತಿ ಸಂಘಗಳು ನಿಯಂತ್ರಿಸುತ್ತಿದ್ದವೆಂದು ಶಾಸನಗಳಿಂದ ವೇದ್ಯವಾಗುತ್ತದೆ.

## ನಾಣ್ಯಗಳು

ಅಥಣಿ ಪ್ರದೇಶದಲ್ಲಿ ಶಾಸನಗಳಲ್ಲಿ ಉಲ್ಲೇಖವಾಗಿರುವ ನಾಣ್ಯಗೆಳೆಂದರೆ ಹಾಗ, ಪಣ, ವೀಸ ಎಂಬ ಹಲವು ಪ್ರಕಾರದ ನಾಣ್ಯಗಳು ಚಲಾವಣೆಯಲ್ಲಿದ್ದುದು ತಿಳಿದುಬರುತ್ತದೆ. ಈ ಪ್ರದೇಶದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಹಾಗ ಎಂಬ ನಾಣ್ಯವು ಕಂಡು ಬಂದಿರುತ್ತದೆ. ವಿನಿಮಯವು ಈ ಪ್ರದೇಶದಲ್ಲಿ ಚಿನ್ನವು ಒಂದು ಎಂದು ತಿಳಿದುಬರುತ್ತದೆ.

ಈ ಕೆಳಗಿನ ನಾಣ್ಯಗಳಿಗಿರುವ ಸಂಬಂಧ ಈ ರೀತಿಯಾಗಿ ನೋಡಬಹುದು:

೧. ಪಣ : ೪ ಹಾಗ

೨. ಹಾಗ : ೨ ಬೆಳೆ

೩. ಕಾಣಿ : ೧ ವೀಸ

ಒಟ್ಟಿನಲ್ಲಿ ಪಣ, ಹಾಗ ಮತ್ತು ವೀಸ ನಾಣ್ಯಗಳು ಪ್ರಾಚೀನ ಮಧ್ಯಕಾಲೀನ ಅಥಣಿ ಪ್ರದೇಶದಲ್ಲಿ ಚಲಾವಣೆಯಲ್ಲಿದ್ದು ಇವೆಲ್ಲವೂ ಪ್ರತ್ಯೇಕ ನಾಣ್ಯಗಳೆಂದು ಈ ನಾಡಿನ ಶಾಸನಗಳ ಅಧ್ಯಯನದಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ.

## ತೆರಿಗೆಗಳು

ಒಂದು ರಾಜ್ಯದ ಇಲ್ಲವೆ ನಾಡಿನ ಆಡಳಿತ ವ್ಯವಸ್ಥೆ ಸಮರ್ಥವಾಗಿ ನಡೆಯಬೇಕಾದರೆ ವಿವಿಧ ಮೂಲಗಳಿಂದ ರಾಜ್ಯಕ್ಕೆ ಹಣ ಇಲ್ಲವೆ ಆದಾಯವು ಸಂದಾಯವಾಗಬೇಕು. ಅಂದಿನ ಸಮಾಜದಲ್ಲಿ ಅನೇಕ ತೆರಿಗೆಗಳು ಬಳಕೆಯಲ್ಲಿದ್ದವು.

ಕ್ರಿ.ಶ. ೧೧೪೭ ರ ತೆಲಸಂಗ ಶಾಸನವು ಹಲವು ಪ್ರಕಾರದ ತೆರಿಗೆಗಳನ್ನು ವಿವರಿಸುತ್ತದೆ. ಬ್ರಿಟಿಷರ ಕಾಲದಲ್ಲಿ ಅಥಣಿ ಪ್ರದೇಶವು ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತೆಂದು ಮೆಂಡಲ್ ಸ್ಲೊ ೧೭ ನೇ ಶತಮಾನದಲ್ಲಿ ವಿವರಿಸಿದ್ದಾನೆ. ರತ್ನಾಗಿರಿ, ಸೋಲಾಪುರ, ಗೋವಾ ಪ್ರದೇಶಗಳಿಗೆ ಇಲ್ಲಿಂದ ವಿವಿಧ ಕಚ್ಚಾ ವಸ್ತುಗಳು ರಪ್ತಾಗುತ್ತಿದ್ದವು ಎಂದಿದ್ದಾನೆ.

ಪ್ರಸ್ತುತ ಅಥಣಿ ಪ್ರದೇಶದ ಆರ್ಥಿಕ ಪರಿಸ್ಥಿತಿ ಉತ್ತಮಗೊಂಡಿದ್ದು ಇಲ್ಲಿನ ಚರ್ಮಗಾರಿಕೆಯಿಂದ ಇವತ್ತಿಗೂ ಅಥಣಿ ಪ್ರದೇಶ ಅಂತರಾಷ್ಟ್ರೀಯ ಮಟ್ಟದಲ್ಲಿ ಹೆಸರು ಪಡೆದಿದೆ. (ಕೊಲ್ಲಾಪುರ ಚಪ್ಪಲಿ) ಇದಲ್ಲದೆ ಇಲ್ಲಿ ನಾಲ್ಕು ಸಕ್ಕರೆ ಕಾರ್ಖಾನೆಗಳು ಸ್ಥಾಪನೆಗೊಂಡಿದ್ದು ಇಲ್ಲಿನ ಆರ್ಥಿಕ ಚಟುವಟಿಗಳಲ್ಲಿ ಮಹತ್ವದ ಪಾತ್ರ ವಹಿಸುತ್ತೀವೆ.

## ಧಾರ್ಮಿಕ ವ್ಯವಸ್ಥೆ

ಧರ್ಮರಹಿತವಾದ ಸಂಸ್ಕೃತಿಯನ್ನು ಇತಿಹಾಸದಲ್ಲಿ ನಾವು ಎಂದಿಗೂ ಕಾಣಲು ಸಾಧ್ಯವಿಲ್ಲ, ಧರ್ಮವು ಸಮಾಜದ ಪ್ರಮುಖ ಅಂಗವಾಗಿದ್ದು, ಅದು ಬೆಳೆದು ಪ್ರಬುದ್ಧ ಸಮಾಜದ ಅಡಿಪಾಯಕ್ಕೆ ಮೂಲ ತಳಹದಿಯಾಗುತ್ತದೆ. ಕರ್ನಾಟಕದ ಧಾರ್ಮಿಕ ಚರಿತ್ರೆಯು ಇತರ ಚರಿತ್ರೆಯಷ್ಟೇ ವೈವಿಧ್ಯಮಯವಾಗಿದೆ. ಕನ್ನಡ ನಾಡಿನಲ್ಲಿ ಬೌದ್ಧ, ಜೈನ, ವೈಷ್ಣವ, ಶೈವ ಧರ್ಮಗಳು ಕಾಣಿಸಿಗುತ್ತವೆ.

ಬೆಳಗಾವಿ ಜಿಲ್ಲೆಯ ಅಥಣಿ ಪರಿಸರದಲ್ಲಿ ಜೈನ, ವೈಷ್ಣವ ಹಾಗೂ ಶೈವ ಧರ್ಮಗಳು ಪ್ರಚಲಿತದಲ್ಲಿವೆ. ಬೌದ್ಧ ಧರ್ಮಕ್ಕೆ ಸಂಬಂಧಿಸಿದ ಯಾವುದೆ ಕುರುಹುಗಳು ದೊರೆಯುವುದಿಲ್ಲ, ಪ್ರಸ್ತುತ ಅಥಣಿ ಪರಿಸರದಲ್ಲಿ ಬೌದ್ಧ ಧರ್ಮದ ಯಾವುದೇ ಕುರುಹುಗಳು ದೊರೆಯದಿದ್ದರೂ ಸಹಿತ ಕೊಕಟನೂರಿನ ಕಲ್ಮೇಶ್ವರ ದೇವಾಲಯದ ಒಳಗೋಡೆಯ ಮೇಲೆ ಬುದ್ಧನ ಉಬ್ಬುಶಿಲ್ಪವಿದ್ದುದು ಕಂಡುಬರುತ್ತದೆ.

**ಜೈನ ಧರ್ಮ :** ಪ್ರಸ್ತುತ ಅಥಣಿ ಪ್ರದೇಶದಲ್ಲಿ ಜೈನ ಧರ್ಮವು ಪ್ರಚಲಿತದಲ್ಲಿತ್ತೆಂದು ಇಲ್ಲಿ ದೊರೆತ ಶಾಸನಾಧಾರಗಳಿಂದ ತಿಳಿದುಕೊಳ್ಳಬಹುದು, ಕ್ರಿ.ಶ. ೧೪೯೨ ರ ಶಾಸನವು ರತ್ನತ್ರಯ ಎಂಬವನು ಜೈನ ದೇವಾಲಯಕ್ಕೆ ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೧೫೬ ರ ಬಳ್ಳಿಗೇರಿ ಶಾಸನದಲ್ಲಿ ಜೈನ ಬಸದಿಗೆ ಪೂಜೆಗಾಗಿ ಹೂದೋಟವನ್ನು ದಾನನಿಡಿದ್ದನ್ನು ತಿಳಿಸುತ್ತದೆ.[1] ಹೀಗೆ ಬೆರಳಣಿಕೆಷ್ಟು ಉಲ್ಲೇಖಗಳು ಮಾತ್ರ ಜೈನ ಧರ್ಮಕ್ಕೆ ಸಂಬಂಧಪಟ್ಟ ಹಾಗೆ ದೊರೆಯುತ್ತವೆ.

ಕ್ರಿ.ಶ. ೧೧೫೩ ರ ಶೇಡಬಾಳ ಶಾಸನವು ಚಾಲುಕ್ಯ ದೊರೆ ವಿಜಯಾದಿತ್ಯನ ಆಳ್ವಿಕೆಯದಾಗಿದ್ದು. ವಿಜಯಾದಿತ್ಯನು ಶಾಂತಿನಾಥ ಜಿನಾಲಯಕ್ಕೆ ಅಕ್ಕಸಾಲಿಗರಿಂದ ಹೊಂಗೆವೀಸ ನಾಣ್ಯವನ್ನು ದಾನಕೊಟ್ಟ ಬಗ್ಗೆ ಉಲ್ಲೇಖವಿದೆ. ಕಾಗವಾಡದಲ್ಲಿ ಶಾಂತಿನಾಥ ಜಿನಾಲಯ ವಿದ್ದು ಇದನ್ನು ಕಗ್ಗೂಡರಾಯನ ಗುಡಿ ಎಂದು ಕರೆಯುತ್ತಾರೆ.

**ಸಂಘಗಳು :** ಜೈನ ಧರ್ಮದ ಸಂಘಗಳ ಅಸ್ತಿತ್ವದ ಬಗ್ಗೆ ಶಾಸನಗಳಲ್ಲಿ ಉಲ್ಲೇಖವಿದೆ. ಚಾತುವರ್ಣ ಸಂಘ ಎಂಬ ಉಲ್ಲೇಖ ಅನೇಕ ಶಾಸನಗಳಲ್ಲಿ ಕಂಡುಬರುತ್ತಿದೆ. ಜೈನ ಮುನಿಗಳ ಸಂಪರ್ಕವನ್ನು ಸಮಾಜದ ಜೊತೆಗೆ ಕಲ್ಪಿಸಲು ಈ ಸಂಘಗಳ ಪಾತ್ರ ಅತಿಮುಖ್ಯವಾಗಿತ್ತು. ಸನ್ಯಾಸಿ, ಸನ್ಯಾಸಿನಿ, ಜೈನಗ್ರಹಸ್ಥ, ಜೈನ ಗ್ರಹಿಣಿ, ಇವೆಲ್ಲ ಪ್ರಮುಖ ಸಂಘದ ಅಂಶಗಳು, ಅಂದರೆ ಚತುವರ್ಣ ವ್ಯವಸ್ಥೆಗಳು ಕ್ರಿ.ಶಕ. ದ ಆದಿಯಿಂದಲೇ ಕಂಡುಬರುತ್ತಿದ್ದವು. ಕಲ್ಯಾಣ ಚಾಲುಕ್ಯರ ಕಾಲದಿಂದಲೂ ಅಥಣಿ ಪ್ರದೇಶದಲ್ಲಿ ತಲೆ ಎತ್ತಿದ ಜೈನಧರ್ಮ ನಂತರ ಹೊಯ್ಸಳ, ವಿಜಯನಗರ ಅರಸರುಗಳ ಪ್ರಭಾವದಿಂದಾಗಿ ಅನೇಕ ಬಸದಿಗಳು ಈ ಪ್ರದೇಶದಲ್ಲಿ ನಿರ್ಮಾಣಗೊಂಡವು ಇವುಗಳಿಗೆ ದಾನ ದತ್ತಿಗಳು ಭರದಿಂದ ದೊರೆತ್ತಿದ್ದವು ಎಂದು ಶಾಸನಗಳಿಂದ ವೇದ್ಯವಾಗುತ್ತದೆ.

**ಬಸದಿಗಳು :** ಪ್ರಾಚಿನ ಹಾಗೂ ಮಧ್ಯಕಾಲೀನ ಅವದಿಯಲ್ಲಿ ಜೈನ ಮುನಿಗಳು ವಾಸಿಸುತ್ತಿದ್ದ ಸ್ಥಳಗಳನ್ನು ಬಸದಿಗಳೆಂದು ಕರೆದಿದ್ದಾರೆ. ಜೈನ ಮುನಿಗಳು ಪ್ರಾರಂಭದಲ್ಲಿ ವರ್ಷದ ನಾಲ್ಕುತಿಂಗಳು ಹೊರತು ಪಡಿಸಿ ವರ್ಷವಿಡಿಯೆಲ್ಲ ವಿಹರಿಸುತ್ತಿರಬೇಕೆಂಬ ನಿಯಮವಿದ್ದರೂ ಕ್ರಮೇಣ ಈ ನಿಯಮ ಸಡಿಲಗೊಂಡು ಜೈನ

ಮುನಿಗಳು ಒಂದೇ ಕಡೆ ನೆಲೆಸಲು ಪ್ರಾರಂಭಿಸಿದರು. ಈ ವಸತಿಗ್ರಹಗಳೇ ಬಸದಿಗಳಾಗಿ ಬೆಳೆದವು. ಜೈನ ದೇವಾಲಯವನ್ನು ಬಸದಿ ಎಂದು ಕರೆಯಲು ಇದೆ ಕಾರಣವಿರಬಹುದು.

ಕ್ರಿ.ಶ. ೧೧೫೬ ರ ಶಾಸನವೊಂದರಲ್ಲಿ ಪಾರ್ಶ್ವನಾಥ ತೀರ್ಥಂಕರ ಬಸದಿಯ ಪೂಜೆಗೆ ಹೂದೋಟ ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ. ಅಥಣಿ ಪರಿಸರದಲ್ಲಿ ಮದಭಾವಿ ಹಾಗೂ ಸವದಿಯ ಆದಿನಾಥ ಬಸದಿಗಳು ಪ್ರಾಚಿನ ಕಾಲದವುಗಳಾಗಿವೆ. ಬಸದಿಗಳಲ್ಲಿರುವ ವಿಗ್ರಹಗಳ ಆಧಾರದ ಮೇಲೆ ಈ ಪ್ರದೇಶದಲ್ಲಿ ದಿಂಗಂಬರ ಶಾಖೆಯ ಜನರು ಹೆಚ್ಚಾಗಿ ವಾಸಿಸುತ್ತಿದ್ದರೆಂದು ತಿಳಿದು ಬರುತ್ತದೆ.

**ನಿಷಿಧಿಗಳು ಅಥವಾ ಸಮಾಧಿ ಮರಣ**

ಜೈನ ಧರ್ಮದಲ್ಲಿ ಸಮಾಧಿಮರಣವು ಬಸದಿಗಳ ನಿರ್ಮಾಣದಷ್ಟೇ ಪವಿತ್ರವಾದ ಹಾಗೂ ಪೂಜ್ಯನಿಯವಾದ ಕಾರ್ಯವಾಗಿದೆ. ಜೈನ ಧರ್ಮದಲ್ಲಿ ಅಧ್ಯಾತ್ಮಿಕವಾಗಿ ಉನ್ನತ ಸ್ಥಾನಕ್ಕೆರಿದ ನಂತರ ಕೊನೆಗಾಲದಲ್ಲಿ ಜೀವತ್ಯಾಗ ಮಾಡಲು ಉಪವಾಸ ವ್ರತ ಕೈಗೊಂಡು ಮರಣ ಹೊಂದುವುದೇ ಸಮಾಧಿ ಅಥವಾ ನಿಷಿಧಿ ಮರಣ ಎಂದು ಕರೆಯುವರು. ಈ ರೀತಿ ಮರಣಹೊಂದಿದವರ ಸ್ಮರಣಾರ್ಥವಾಗಿ ನಿಲ್ಲಿಸಿದ ಶಿಲೆಯೇ ನಿಷಿಧಿಕಲ್ಲಾಗಿದೆ. ಜೈನಧರ್ಮದಲ್ಲಿ ಇದನ್ನು ಪವಿತ್ರ ಸ್ಮಾರಕವೆಂದು ಪರಿಗಣಿಸಿದ್ದಾರೆ. ಇಂತಹ ಸ್ಮಾರಕಗಳು ಆಯಾ ವರ್ಗದ ಆರ್ಥಿಕ ಸಾಮಾರ್ಥ್ಯವನ್ನು ತಿಳಿಸುತ್ತವೆ. ನಿಷಿಧಿಕಲ್ಲುಗಳಲ್ಲಿರುವ ವಿವರಣೆಗಳನ್ನು ಕನ್ನಡ ನಾಡಿನ ಪ್ರಥಮ ಶಾಸನ ಪಾಠವೆಂದು ಊಹಿಸಲಾಗಿದೆ. ಇವು ಜೈನ ಧರ್ಮದ ತತ್ವ ಹಾಗೂ ಆಚರಣೆಗಳ ನಿಶ್ಚಿತ ನಿಯಮಗಳನ್ನು ತಿಳಿಸಿಕೊಂಡುತ್ತವೆ. ಇದರಲ್ಲಿರುವ ಚಿತ್ರಗಳ ಮೂಲಕ ನಿಷಿಧಿಕಲ್ಲುಗಳನ್ನು ತಕ್ಷಣ ಗುರುತಿಸಬಹುದು. ಒಂದು ಕಡೆಗೆ ಬೋಧಿಸುತ್ತಿರುವ ಗುರು, ಮತ್ತೊಂದು ಕಡೆ ಆಲಿಸುತ್ತಿರುವ ಶಿಷ್ಯ ಇವರಿಬ್ಬರ ನಡುವೆ ತೆರೆದ ಪುಸ್ತಕವನ್ನಿಟ್ಟಿದ್ದು, ವ್ಯಾಸ ಪೀಠ ಇದರಲ್ಲಿ ಸರ್ವೇಸಾಮಾನ್ಯವಾಗಿ ಕಂಡುಬರುತ್ತದೆ. ಅಥಣಿ ಪರಿಸರದ ಯಾವುದೇ ಶಾಸನದಲ್ಲಿ ನಿಷಿಧಿ ಮರಣ ಅಥವಾ ನಿಷಿಧಿಕಲ್ಲುಗಳ ಬಗ್ಗೆ ಉಲ್ಲೇಖ ವಿರುವದಿಲ್ಲ. ಜೈನಧರ್ಮದ ಜನರು ಈ ಪ್ರದೇಶದಲ್ಲಿ ಹೆಚ್ಚಾಗಿ ಕಂಡುಬಂದಿರುವದರಿಂದ ನಿಷಿಧಿ ಕಲ್ಲುಗಳು ಇಲ್ಲಿ ಇರಬಹುದು. ಆದರೆ ಅವುಗಳು ಭೂಮಿಯಲ್ಲಿ ಹೂತುಹೋಗಿರಬಹುದು ಇವುಗಳ ಬಗ್ಗೆ ಇನ್ನೂ ಸಂಶೋಧನೆ ನಡೆಯಬೇಕಾಗಿದೆ.

**ಶೈವ ಧರ್ಮ :** ಕರ್ನಾಟಕದಲ್ಲಿ ಶೈವ ಧರ್ಮದ ಪ್ರಾಚೀನತೆಯು ಚರಿತ್ರೆಯ ಅಧ್ಯಯನದೂದ್ದಕ್ಕೂ ಹಾಸುಹೊಕ್ಕಾಗಿದೆ. ಕರ್ನಾಟಕದ ಶೈವಧರ್ಮದಲ್ಲಿ ಕಪಾಲಿಕರು, ಲಾಕುಲಿಸ ಅಥವಾ ಪಾಶುಪತ ಕಾಳಾಮುಖರು ಹಾಗೂ ವೀರಶೈವರು ಎಂಬ ಪಂಗಡಗಳಿವೆ. ಈ ಪರಿಸರದಲ್ಲಿ ಕಪಾಲಿಕರ ಬಗ್ಗೆ ಉಲ್ಲೇಖವಿಲ್ಲ ಹೆಚ್ಚಾಗಿ ಕಾಳಾಮುಖಕರು ಮತ್ತು ವೀರಶೈವರ ಬಗ್ಗೆ ಕುರುಹುಗಳ ಸ್ಪಷ್ಟವಾಗಿ ದೊರೆಯುತ್ತವೆ. ಅಥಣಿ ಪ್ರದೇಶವನ್ನಾಳಿದ ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ದೇವಗಿರಿಯಾದವರು ಹಾಗೂ ಶಿಲಾಹಾರರ ಕಾಲದಲ್ಲಿ ಶೈವ ಯತಿಗಳು ಪೂಜಿತರಾಗಿದ್ದರಲ್ಲದೇ ಅವರು ಸ್ಥಾಪಿಸಿದ ಮಠಗಳಿಗೆ ಉದಾರ ದಾನಗಳು ಅರಸರಿಂದ ದೊರೆತವು.

ಈ ದೇವಾಲಯಗಳ ಹಾಗೂ ಮಠಗಳ ಪೂಜೆ ಪೂನಸ್ಕಾರ, ದೇವರ ಅಂಗಭೋಗ, ರಂಗಭೋಗ,

ಖಂಡಸ್ಪಟಿಕ, ಜಿರ್ಣೋದ್ದಾರ, ತಪೋಧನ, ವಿದ್ಯಾರ್ಥಿಗಳಿಗೆ ವಸತಿ ಹಾಗೂ ಆಹಾರಕ್ಕಾಗಿ ದಾನ ನೀಡಿದ ವಿಷಯಗಳು ಇಲ್ಲಿ ದೊರೆತ ಶಾಸನಾಧಾರಗಳಿಂದ ತಿಳಿಯಬಹುದು. ಉದಾ: ಕ್ರಿ.ಶ. ೧೧೮೨ ಮದಭಾವಿ ಶೈವದೇವಾಲಯವಾದ ಮಹಾದೇವ ದೇವಾಲಯವನ್ನು ನಿರ್ಮಾಣಮಾಡಲು ಮಹಾವಡ್ಡ ವ್ಯೆಚಾರಿಕ ಸವಸಿಗಾರ ಚಟ್ಟಯ್ಯಾ ಇವನು ಭೂಧಾನ ಮಾಡಿದ ಬಗ್ಗೆ ಉಲ್ಲೇಖವಿದೆ.

ಕ್ರಿ.ಶ. ೧೧೯೯ ರ ಕೊಕಟನೂರ ಶಾಸನವು ಸ್ವಯಂಭು ವಿಶ್ವೇಶ್ವರದೇವ ದೇವಾಲಯದ ಆಚಾರ್ಯರಾದ ವಿಧ್ಯಾರಸಿ ಪಂಡಿತ ದೇವನಿಗೆ ಅರಸನು ಭೂಮಿಯನ್ನು ದತ್ತಿಯನ್ನಾಗಿ ನೀಡಿದ್ದನೆಂದು ಉಲ್ಲೇಖಿಸುತ್ತದೆ. ಈ ಭೂಮಿಯ ಆದಾಯವು ದೇವಾಲಯದ ಧಾರ್ಮಿಕ ಚಟುವಟಿಕೆಗಳಲ್ಲದೆ. ವಿದ್ಯಾರ್ಥಿಗಳು ವಾಸಿಸುವ ಆಗ್ರಹಾರಗಳಿಗೂ ಉಪಯೋಗವಾಗುತ್ತಿತ್ತು.

## ಶೈವಧರ್ಮದ ಶಾಖೆಗಳು

ಲಾಕುಲೀಶ, ಪಾಸುಪಾತ, ಕಾಳಾಮುಖ, ಕಪಾಲಿಕ ಮತ್ತು ವೀರಶೈವಾದಿಗಳೂ ಶೈವಧರ್ಮದ ಮತಗಳೆನಿಸಿವೆ. ನಕುಲೀಶನೆಂಬವ ಪಾಶುಪತ ಪಂಥದ ಸ್ಥಾಪಕನಾಗಿದ್ದಾನೆ. ಆದ್ದರಿಂದ ಇದಕ್ಕೆ ಲಕುಲೀಶ ಪಾಶುಪತ ಪಂಥವೆಂದು ಹೆಸರು. ಡಾ॥ ಚಿದಾನಂದ ಮೂರ್ತಿಯವರು ಅಭಿಪ್ರಾಯ ಪಡುವಂತೆ ಲಾಕುಲೀಶ ಪಾಶುಪತ ಮತ್ತು ಕಾಳಾ ಮುಖಗಳೆರಡೂ ಒಂದೇ ಎಂದೂ, ಅವು ಶೈವಧರ್ಮಕ್ಕೆ ಇರುವ ಹೆಸರುಗಳೆಂದು ಸಮರ್ಥಿಸಿದ್ದಾರೆ.[೧೦] ಪಾಶುಪತ ಕಾಳಾಮುಖ ಆಚಾರ್ಯರು ಅಥಣಿ ಪ್ರದೇಶದಲ್ಲಿ ಯತಿಗಳೆಂದು ಪ್ರಸಿದ್ಧರಾಗಿದ್ದಾರೆಂದು ಶಾಸನಗಳಿಂದ ತಿಳಿಯುತ್ತದೆ.

## ಸ್ಥಾನಪತಿಗಳು (ಕಾಳಾಮುಖಯತಿಗಳು)

ದೇವಸ್ಥಾನದ ಮುಖ್ಯಸ್ಥನನ್ನು ಸನ್ಯಾಸಿಯಲ್ಲದಿದ್ದರೂ ಕೆಲವುಕಡೆ ಸ್ತಾನಿಕ ಎಂದು ಕರೆಯಲಾಗಿದ್ದರೂ ಸಹ ಸನ್ಯಾಸಿಯಾಗಿ ದೇವಸ್ತಾನದಲ್ಲಿ ಅಥವಾ ಅದಕ್ಕೆ ಸಂಬಂಧಿಸಿದ ಮಠಗಳಲ್ಲಿ ವಾಸಿಸುತ್ತಾ ಅದರ ಮೇಲ್ವಿಚಾರಣೆ ಮಾಡುತ್ತಾ ವಿದ್ಯಾದಾನ ಮಾಡುತ್ತಿದ್ದ ಶೈವ ಸನ್ಯಾಸಿಯನ್ನು ಸ್ಥಾಪಕ ಅಥವಾ ಸ್ಥಾನಪತಿ ಎಂದು ಕರೆಯಲಾಗಿದೆ.

ಕ್ರಿ.ಶ. ೧೧೯೯ ರ ಕೊಕಟನೂರು ಶಾಸನವು, ಅರಸನು ಮಠದಲ್ಲಿದ್ದ ಋಷಿ ಮತ್ತು ವಿದ್ಯಾರ್ಥಿಗಳ ಅನ್ನದಾಸೋಹಕ್ಕಾಗಿ ವಿದ್ಯಾರಸಿ ಪಂಡಿತದೇವನಿಗೆ ಭೂಮಿ ದಾನ ನೀಡಿದ್ದನು ಎಂಬುದನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೧೨೧ ರ ತೆಲಸಂಗ ಶಾಸನವು ಆರನೆಯ ವಿಕ್ರಮಾದಿತ್ಯನ ರಾಣಿಯು ರೇವಣೇಶ್ವರ ದೇವಾಲಯದ ದುರಸ್ತಿಗಾಗಿ ೧೨ ಮತ್ತರ ಭೂಮಿಯನ್ನು ದಾನ ಮಾಡಿದ್ದನ್ನು ಉಲ್ಲೇಖಿಸುತ್ತದೆ. ಅಥಣಿ ಪ್ರದೇಶಲ್ಲಿ ಪ್ರಸುತ್ತ ವೀರಶೈವ ಧರ್ಮವು ಮಠಗಳ ಮುಖಾಂತರ ನಿರಂತರವಾಗಿ ರಚನಾತ್ಮಕವಾಗಿ ಬೆಳೆಯುತ್ತಿದೆ. ವೀರಶೈವ ಮಠಗಳಿಂದ ಇಂದು ಕೇವಲ ಧಾರ್ಮಿಕ ಚಟುವಟಿಕೆಗಳಲ್ಲದೆ ಶೈಕ್ಷಣಿಕ ಕಾರ್ಯಗಳು ಈ ಪ್ರದೇಶದಲ್ಲಿ ಭರದಿಂದ ಸಾಗಿವೆ.

## ವೈಷ್ಣವ ಧರ್ಮ

ಪ್ರಾಚೀನ ಕರ್ನಾಟಕದ ಶೈವಧರ್ಮವನ್ನು ಚರ್ಚಿಸಿರುವ ಹಾಗೆ ಶಿವನಿಗೆ ಒಂದು ಇತಿಹಾಸವಿರುವಂತೆ ಹಿಂದೂಧರ್ಮದಲ್ಲಿ ಅವನಷ್ಟೇ ಪ್ರಬಲ ದೇವತೆಯಾಗಿರುವ ವಿಷ್ಣುವಿಗೂ ಒಂದು ಇತಿಹಾಸವುಂಟು. ವಿಷ್ಣು ವೇದಗಳಲ್ಲಿ ಪ್ರಧಾನ ದೇವತೆಯಲ್ಲದಿದ್ದರೂ ಅಪ್ರಧಾನವೇನೂ ಅಲ್ಲ. ವೈಷ್ಣವ ಧರ್ಮವು ಭಾರತವನ್ನು ಕ್ರಿಸ್ತಶಕ ಪೂರ್ವದಲ್ಲಿಯೇ ಪ್ರವೇಶಿಸಿದ್ದಿತೆಂದು ನಾನಾಘಾಟ ಶಾಸನದಿಂದ ತಿಳಿದುಬರುತ್ತದೆ. ವಿಷ್ಣುವಿನಲ್ಲಿರಿಸಿದ ಅಚಲವಾದ ಭಕ್ತಿಯೇ ಭವಸಾಗರದಿಂದ ಸಾಧಕನನ್ನು ಮುಕ್ತ ಮಾಡುತ್ತದೆ ಎಂದು ವೈಷ್ಣವ ಧರ್ಮವು ಹೇಳುತ್ತದೆ. ಈ ಧರ್ಮದಲ್ಲಿ ಯಜ್ಞಕ್ಕೆ ಅಗ್ರಸ್ಥಾನವಿದ್ದು ಏಕದೇವೋಪಾಸನೆ ಮತ್ತು ಅಚಲವಾದ ಭಕ್ತಿ ಇವೆರಡೂ ಈ ಧರ್ಮದ ವೈಶಿಷ್ಟ್ಯಗಳು. ಈ ಧರ್ಮವು ಅಭಿವೃದ್ಧಿ ಹೊಂದುತ್ತಾ ಹೋದಂತೆ ನಾರಾಯಣನ ಕಲ್ಪನೆಯನ್ನು ಮೈಗೂಡಿಸಿಕೊಂಡಿತು.

ಕರ್ನಾಟಕವನ್ನು ಆಳಿಹೋದು ಅನೇಕ ಅರಸುಮನೆತನಗಳು ವೈಷ್ಣವ ಧರ್ಮಾವಲಂಬಿಯಾಗಿದ್ದರು. ಕ್ರಿ.ಶ. ೬ ನೆಯ ಶತಮಾನದಲ್ಲಿ ಮಹಾಭಾಗವತನಾದ ಬಾದಾಮಿ ಚಾಲುಕ್ಯ ದೊರೆ ಮಂಗಳೇಶನು ಬಾದಾಮಿಯಲ್ಲಿ ಸುಪ್ರಸಿದ್ಧವಾದ ವೈಷ್ಣವ ಗುಹಾಂತರ್ದೇವಾಲಯವನ್ನು ಕೊರೆಯಿಸಿದನೆಂದು ಕ್ರಿ.ಶ.೫೭೮ ರ ಬಾದಾಮಿ ಬಂಡೆಗಲ್ಲು ಶಾಸನದಿಂದ ಖಚಿತವಾಗುತ್ತದೆ.

ಅಥಣಿ ಪ್ರದೇಶದಲ್ಲಿ ಜೈನ, ಶೈವ ಮತಗಳಂತೆ ವೈಷ್ಣವ ಮತ ಹೆಚ್ಚು ಪ್ರಚಲಿತದಲ್ಲಿದ್ದಿತು. ಈ ಪ್ರದೇಶವನ್ನಾಳಿದ ಅರಸರಾಗಲಿ, ಸಾಮಂತ ಮನ್ನೆಯರಾಗಲಿ, ಅಧಿಕಾರಿಗಳಾಗಲಿ ಪರಧರ್ಮ ಸಹಿಷ್ಣುಗಳಾಗಿದ್ದು ಇತರ ಧರ್ಮಗಳಿಗೆ ಪ್ರೋತ್ಸಾಹವಿತ್ತಂತೆ ವೈಷ್ಣವಧರ್ಮಕ್ಕೂ ಪ್ರೋತ್ಸಾಹ ನೀಡಿದ್ದರೆಂಬುದಕ್ಕೆ ಈ ನಾಡಿನ ಶಾಸನಗಳಲ್ಲಿ ಕಂಡುಬರುವ ವೈಷ್ಣವ ದೇವಾಲಯಗಳಿಂದ ತಿಳಿದುಬರುತ್ತದೆ. ಅವುಗಳಿಗೆ ನೀಡಿದ್ದ ದಾನದತ್ತಿ ಮತ್ತು ವೈಷ್ಣವ ಗುರುಗಳ ಉಲ್ಲೇಖವು ಇದಕ್ಕೆ ನಿದರ್ಶನವಾಗಿದೆ. ಉದಾಹರಣೆಗಾಗಿ ಕ್ರಿ.ಶ. ೧೧೧೫ ರಾಮತೀರ್ಥ ಶಾಸನವು ರಾಮೇಶ್ವರ ದೇವಾಲಯದ ಪೂಜೆ, ಸನ್ಯಾಸಿಗಳ ಪೋಷಣೆಗೆ ದೇವಾಲಯದ ದುರಸ್ತಿಗೋಸ್ಕರ ಭೂಮಿ ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೧೬೬ ರ ರಾಮತೀರ್ಥ ಶಾಸನವು ಶ್ರೀ ಸ್ವಯಂಭು ರಾಮೇಶ್ವರದೇವಾಲಯದ ಆಚಾರ್ಯನಾದ ಚಂದ್ರಾಭರಣಪಂಡಿತನ ಬಗ್ಗೆ ಉಲ್ಲೇಖಿಸುತ್ತದೆ. ಕ್ರಿ.ಶ. ೧೩೦೬ ರ ಕೊಕಟನೂರ ಶಾಸನವು ರಂಗನಾಥ ದೇವಾಲಕ್ಕೆ ಮಹಾಮಂಡಳೇಶ್ವರ ಗುಂಡರಸರಿಂದ ಭೂಮಿಯನ್ನು ದಾನ ನೀಡಲ್ಪಟ್ಟಿತ್ತೆಂದು ದಾಖಲಿಸುತ್ತದೆ.

ಪ್ರಾಚೀನ ಹಾಗೂ ಮಧ್ಯಕಾಲೀನ ಕರ್ನಾಟಕದ ಅಥಣಿ ಪ್ರದೇಶವು ಚತುಸ್ಸಮಯಗಳ ನೆಲೆವೀಡಾಗಿ ಧರ್ಮನಿವಾಸ ತೀರ್ಥಕ್ಷೇತ್ರವಾಗಿ ಬೆಳಗಿತು. ಅಲ್ಲದೆ ಹಲವು ಧರ್ಮಗಳ, ಮುನಿಗಳ ಸ್ಥಾನಾಚಾರ್ಯರ ಆಶ್ರಯಸ್ಥಾನವಾಗಿ ಕಂಗೊಳಿಸಿತು. ಹಲವು ಧರ್ಮಗಳ ಪ್ರಭಾವದಿಂದಲೇ ಅನೇಕ ಬಸದಿಗಳು, ದೇವಾಲಯಗಳು, ಮಠಗಳ ಬೆಳವಣಿಗೆ ಹೊಂದಿ ಹಲವು ವಿಧದ ಚಟುವಟಿಕೆಗಳೂ ಮುಂದುವರೆದುಕೊಂಡು ಬಂದವು. ವೈಷ್ಣವ ಧರ್ಮೀಯ ಜನಾಂಗದವರು ಹಲವಾರು ಕಡೆ ಕಂಡುಬಂದಿದ್ದಾರೆ. ಉದಾಹರಣೆಗೆ ಅಥಣಿ, ತೆಲಸಂಗ, ಸತ್ತಿ, ಐನಾಪೂರ ಮುಂತಾದ ಕಡೆ ಇಂದಿಗೂ ವಾಸವಾಗಿದ್ದಾರೆ.

## ವೀರಶೈವ ಧರ್ಮ

ವೀರಶೈವ ಧರ್ಮವು ಕನ್ನಡನಾಡಿನಲ್ಲಿ ಪ್ರಚಲಿತವಿದ್ದ ಹಲವು ಮತಗಳಲ್ಲಿ ಒಂದು. ಶೈವ ಮತದ ಅಭಿನವ ಪಾಶುಪತ ಪಂತದ ಮುಂದುವರಿಕೆಯೇ ರೂಪವೆ ವೀರಶೈವ ಧರ್ಮ. ಕ್ರಿ.ಶ.೧೨ನೆಯ ಶತಮಾನದ ಕರ್ನಾಟಕದ ಧಾರ್ಮಿಕ ಇತಿಹಾಸದಲ್ಲಿ ಒಂದು ಅದ್ವಿತೀಯವಾದ ಯುಗ. ಕಲಚೂರಿ ದೊರೆ ಬಿಜ್ಜಳನ ಬಳಿ ದಂಡಾಧಿಕಾರಿಯಾಗಿದ್ದ ಬಸವಣ್ಣನವರು ಕೈಗೊಂಡ ಅದ್ಯಾತ್ಮಿಕ ಕ್ರಾಂತೀಯ ಕಾರ್ಯಕ್ಷೇತ್ರ ಜೀವನದ ಎಲ್ಲ ಮುಖಗಳನ್ನು ವ್ಯಾಪಿಸಿತ್ತು. ಧರ್ಮದ ಹೆಸರಿನಲ್ಲಿ ಬೆಳದು ನಿಂತಿದ್ದ ಹಳೆಯ ಕೊಳೆಯನ್ನೇ ಬದಿಗೆ ಸರಿಸಿ ವೀರಶೈವ ಧರ್ಮ ಮಹಾಪುರದಂತೆ ಹರಿಯಿತು.

ವೀರಶೈವ ಮತದ ಪ್ರಾಚೀನತೆಯನ್ನು ಸ್ಥಾಪಿಸಲು ಸಾಕಷ್ಟು ಚಾರಿತ್ರಿಕ ಆಧಾರಗಳು ದೊರೆತಿಲ್ಲ. ಬಸವೇಶ್ವರರೇ ವೀರಶ್ವೆವ ಮತದ ಸ್ಥಾಪಕರೆಂದು ಪ್ರೊ. ಎಂ.ಆರ್. ಸಾಖರೆ ಅವರು ಅಭಿಪ್ರಾಯಪಡುತ್ತಾರೆ. ಈ ಊಹೆಯನ್ನು ಒಪ್ಪುವುದು ಕಷ್ಟ. ಶೈವಪಂಥವು ಅತಿ ಪ್ರಾಚೀನ ಧರ್ಮ. ಶೈವಪಂಥ ಬಸವೇಶ್ವರರ ಕಾಲಕ್ಕಿಂತ ಹಲವಾರು ಶತಮಾನಗಳ ಹಿಂದೆಯೇ ಭರತಖಂಡದಲ್ಲೆಲ್ಲ ಹರಡಿಕೊಂಡಿತ್ತು. ಕನ್ನಡ ನಾಡಿನಲ್ಲೂ ಕೂಡ ಶೈವ ಧರ್ಮವು ಪುರಾತನ ಕಾಲದಲ್ಲಿ ಅಸ್ತಿತ್ವದಲ್ಲಿತ್ತು. ಆ ಅಸ್ತಿತ್ವವನ್ನು ಪರಿಷ್ಕರಿಸಿ ಅದಕ್ಕೆ ಆಧುನಿಕ ರೂಪ ಕೊಟ್ಟ ಕೀರ್ತಿಬಸವೇಶ್ವರರಿಗೆ ಸಲ್ಲುತ್ತದೆ. ಇದರಿಂದಾಗಿ ಬಸವೇಶ್ವರರ ಕೀರ್ತಿಯು ಎಲ್ಲಲ್ಲೂ ವ್ಯಾಪಿಸಿದೊಡನೆ ದೇಶದ ನಾಲ್ಕೂ ದಿಕ್ಕುಗಳಿಂದ ಭಕ್ತಜನರು ಅಸಂಖ್ಯ ರೀತಿಯಲ್ಲಿ ಬಂದು ಬಸವೇಶ್ವರ ಅನುಯಾಯಿಗಳಾದರು. ಬಸವೇಶ್ವರರಿಗಿಂತ ಮೊದಲೇ ಶೈವಧರ್ಮವಿತ್ತೆಂಬುದಕ್ಕೆ ಇದುವೇ ಪ್ರಮಾಣವೆಂದೂ ಬಸವೇಶ್ವರರ ಕಾಲದಲ್ಲಿ ಶೈವಧರ್ಮವು ಪುನರುಜ್ಜೀವನ ಹೊಂದಿ ವೀರಶೈವಧರ್ಮವಾಗಿ ಮಾರ್ಪಟ್ಟಿತ್ತೆಂದು ಡಾ॥ ಎಸ್.ಸಿ. ನಂದೀಮಠರವರು ಅಭಿಪ್ರಾಯಪಡುತ್ತಾರೆ.

ಈ ಅವಧಿಯ ಕಾಲಕ್ಕೆ ಪ್ರಸ್ತುತ ಅಥಣಿ ಪ್ರದೇಶದಲ್ಲಿ ವೀರಶೈವ ಧರ್ಮವು ಪ್ರಚಲಿತದಲ್ಲಿತ್ತೆಂದು ಇಲ್ಲಿ ದೊರೆತ ಶಾಸನಾಧಾರಗಳಿಂದ ತಿಳಿದುಕೊಳ್ಳಬಹುದು. ತೆಲಸಂಗದಲ್ಲಿ ಈಗಲೂ ಪಳೆಯುಳಿಕೆಯಾಗಿ ನಿಂತಿರುವ ವೀರಶೈವ ಸಂಪ್ರದಾಯದ ಅಂದಾನಿಮಠ ಹಾಗೂ ವಿರಕ್ತಮಠಗಳು ಆಧಾರಗಳಾಗಿವೆ. ಅಥಣಿ ಶಿವಯೋಗಿ ಮುರುಘೇಂದ್ರ, ಗಚ್ಚಿನ ಮಠವು ಪ್ರಸ್ತುತ ಅಥಣಿ ಪ್ರದೇಶದಲ್ಲಿ ವೀರಶೈವ ಧರ್ಮಕ್ಕೆ ಸಂಬಂಧಿಸಿದ್ದು ಇದು ಸುಮಾರು ೪೦೦ ವರ್ಷಗಳ ಹಿಂದೆ ಶ್ರೀ ಮಹಾತ್ಮಾ ರೇವಣಸಿದ್ಧಸ್ವಾಮಿಗಳವರಿಂದ ಸ್ಥಾಪಿಸಲ್ಪಟ್ಟಿತು ಎಂದು ಉಲ್ಲೇಖವಿದೆ.

★★★

## ಅಡಿ ಟಿಪ್ಪಣಿಗಳು

೧) ಬೆಲಗಮ್ ಡಿಸ್ಟ್ರಿಕ್ಟ ಗ್ಯಾಜಿಟೀಯರ್
ಸಂ. ಜೆಮ್ಸ. ಎಮ್. ಕ್ಯಾಂಪಬೆಲ್ -೧೮೮೫
ಪುಟ. ಸಂ -೫೩೩.

೨) ಕರ್ನಾಟಕ ಇನ್‌ಸ್ಕ್ರಿಪ್ಟ್‌ನ್‌ಸ ಸಂ. ೨
ಶಾ. ಸಂ - ೧೩
ಪು. ಸಂ - ೪೮

೩) ಶಿವಾನುಭವ ಸಂಚಿಕೆ - ೧ ಮತ್ತು
ಅಥಣಿ ತಾಲೂಕಿನ ಇತರ ದೇಸಗತ್ತಿಗಳು
ಕೊಕಟನೂರಿನ ದೇಸಾಯಿಗಳು
(ಸಂಪ್ರಬಂಧ)
ಸಂಶೋಧಕರು : ಶ್ರೀಶೈಲ ದೇವರಡ್ಡಿ.

೪) ಅಲ್ತೇಕರ ಎ. ಎಸ್ - ವೇದಗಳ ಕಾಲದ ಸಮಾಜ
ಯುಗಧರ್ಮ ಭಾರತೀಯ ಸಂಸ್ಕೃತಿ
ಸಂ : ೧
ಪು. ೧೬೯

೫) ಚಿದಾನಂದ ಮೂರ್ತಿ -ಎಂ ಕನ್ನಡ ಶಾಸನಗಳ
ಸಾಂಸ್ಕೃತಿಕ ಅಧ್ಯಯನ ಪು. ೪೧೩

೬) ಷೇಕ ಅಲಿ. ಬಿ. ಕರ್ನಾಟಕ ಚರಿತ್ರೆ
ಪು. ೨೪೫

೭) ಕರ್ನಾಟಕ ಇನ್‌ಸ್ಕ್ರಿಪ್ಷನ್ಸ್
ಸಂಪುಟ. ೨
ಶಾ. ಸಂ. ೧೫

೮) ಅದೇ ಸಂ. ೨
ಶಾಸ.ಸಂ. ೨೧
ಪುಟ. ೭೯ -೮೦

೯) ಆನ್ಯೂವಲ್ ರಿಪೋರ್ಟ್ಸ್
೧೯೫೩-೫೪, ಪುಟ,೩೬.

೧೦) ಚಿದಾನಂದಮೂರ್ತಿ ಎಮ್.
ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,
೧೯೭೯. ಪುಟ ೧೬೧-೧೬೨

ಅಧ್ಯಾಯ - ೪

# ಅಥಣಿ ಪರಿಸರದ ಶೈಕ್ಷಣಿಕ ಹಾಗೂ ಸಾಹಿತ್ಯ ಪರಂಪರೆ

## ಶೈಕ್ಷಣಿಕ ವ್ಯವಸ್ಥೆ

ಕನ್ನಡ ನಾಡಿನ ಪ್ರಾಚೀನ ಸಂಸ್ಕೃತಿಯು ಶ್ರೇಷ್ಠ ನಾಗರಿಕತೆಯ ಕುರಹುವಾಗಿ ನಿರಂತರವಾಗಿ ಸಾಗಿದೆ. ಇದಕ್ಕೆ ಮುಖ್ಯ ಕಾರಣ ಈ ಪ್ರದೇಶದ ಜನರ ಬೌದ್ಧಿಕವೃದ್ಧಿಯ ಸಾಧನವಾದ ಶಿಕ್ಷಣ. ಅಥಣಿ ಪರಿಸರ ಶೈಕ್ಷಣಿಕ ವ್ಯವಸ್ಥೆಯ ಪ್ರಾಚೀನತೆಯನ್ನು ಶಾಸನಗಳಲ್ಲಿ ಉಲ್ಲೇಖವಾದ ಅಗ್ರಹಾರಗಳಿಂದ ಗುರುತುಸಬಹುದು. ಪ್ರಾಚೀನ ಶೈಕ್ಷಣಿಕ ಪದ್ಧತಿಯಾದ ಗುರುಕುಲ ಮಾದರಿಯ ಶಿಕ್ಷಣ ಈ ಪರಿಸರದಲ್ಲಿ ಬೆಳದುಬಂದ ಹಿನ್ನಲೆಯನ್ನು ಸ್ಪಷ್ಟವಾಗಿ ವಿವರಿಸುವಂತಹ ಸ್ಥಳಗಳು ನಮಗೆ ಲಭ್ಯವಾಗಿಲ್ಲ. ಆದರೆ ಈ ಪ್ರದೇಶದ ಸಾಂಸ್ಕೃತಿಕ ಅಭಿವೃದ್ಧಿಯನ್ನು ಗಮನಿಸಿದಾಗ ಶ್ರೇಷ್ಠ ಮಟ್ಟದ ನೈತಿಕ ಹಾಗೂ ಶಾರೀರಿಕ ಶಿಕ್ಷಣ ವ್ಯವಸ್ಥೆ ಈ ಪ್ರದೇಶದಲ್ಲಿ ಜಾರಿಯಲ್ಲಿ ಇರಲೇಬೇಕು.

ಸಾಂಪ್ರದಾಯಿಕವಾಗಿ ಅನ್ನದಾನ, ವಿದ್ಯಾದಾನ ಇವೇರಡು ಮೋಕ್ಷ ಸಾಧನೆಗೆ ಪ್ರಮುಖ ಸಾಧನಗಳೆಂದು ನಂಬಲಾಗಿತ್ತು. ಪ್ರಸ್ತುತ ಶಿಕ್ಷಣ ವ್ಯವಸ್ಥೆಗೆ ವೇದಿಕೆಯೆನಿಸಿದ ವಿದ್ಯಾಸಂಸ್ಥೆಗಳನ್ನು (ಅಗ್ರಹಾರ) ಸ್ಥಾಪಿಸಿ, ಅವುಗಳಿಗೆ ಹೆರಳವಾಗಿ ದಾನ ಕೊಟ್ಟು ಸಲಹುತ್ತಿದ್ದರು. ಉದಾರ ದಾನಿಗಳಿಂದ ಪೋಷಿತಗೊಂಡು ಅಗ್ರಹಾರಗಳು ಪ್ರಮುಖ ವಿದ್ಯಾಕೇಂದ್ರಗಳಾಗಿದ್ದವು. ಪ್ರಾಚೀನ ವಿದ್ಯಾಸಂಸ್ಥೆಗಳೆಂದು ಅಗ್ರಹಾರ ಘಟಿಕಾಸ್ಥಾನಗಳನ್ನು ಗುರುತಿಸಲಾಗುತ್ತಿತ್ತು. ಇಂತಹ ಸ್ಥಳಗಳು ಅಥಣಿ ಪರಿಸರದಲ್ಲಿ ಅನೇಕ ಕಡೆ ಕಂಡು ಬಂದಿವೆ. ಇವು ಕೇವಲ ವಿದ್ಯಾಕೇಂದ್ರಗಳಾಗಿ ಮಾತ್ರ ಉಳಿಯದೇ ಸಮಕಾಲೀನ ಜನರ ಸಾಮಾಜಿಕ, ಧಾರ್ಮಿಕ ರಾಜಕೀಯ ಚಟುವಟಿಕೆಗಳಲ್ಲಿ ಪ್ರಮುಖ ಪಾತ್ರವಹಿಸಿದ್ದವು.

ಅಥಣಿ ಪರಿಸರದಲ್ಲಿ ಪ್ರಾಚೀನ ಶಿಕ್ಷಣ ವ್ಯವಸ್ಥೆಯ ಬಗ್ಗೆ ಸಾಕಷ್ಟು ವಿವರಗಳು ತಿಳಿದು ಬರುವದಿಲ್ಲ. ದೊರಕಿರುವ ಅಲ್ಪ ಸ್ವಲ್ಪ ಆಧಾರಗಳ ಮೇಲೆ ಆ ಕಾಲದ ಶಿಕ್ಷಣ ವ್ಯವಸ್ಥೆಯನ್ನು ಅಧ್ಯಯನ ಮಾಡಲಾಗಿದೆ. ಈಗಿನಂತೆ ಶಿಕ್ಷಣ ಪ್ರತಿಯೊಬ್ಬರಿಗು ಕಡ್ಡಾಯವಾಗಿರಲಿಲ್ಲ. ರಾಜರು, ಅಧಿಕಾರಿಗಳು, ಧನಿಕರು ಮುಂತಾದ ದಾನಿಗಳು ಕೊಟ್ಟ ಉದಾರವಾದ ದಾನದಿಂದ ಈ ಅಗ್ರಹಾರಗಳು ವಿದ್ಯಾದಾನಮಾಡುತ್ತಿದ್ದವು.[೧] ಪ್ರಾಚೀನ ಅಥಣಿ ಪರಿಸರದಲ್ಲಿ ೭ ಅಗ್ರಹಾರಗಳು ಕಂಡು ಬಂದಿವೆ ಅವುಗಳೆಂದರೆ -

೧) ತೆಲಸಂಗ ೨) ಕೊಕಟನೂರ ೩) ರಾಮತೀರ್ಥ ೪) ಐನಾರುಕ ೫) ಕೊಟ್ಟಲಗಿ ೬) ಸತ್ತಿ ೭) ಮದಬಾವಿ [೨]

ಆರನೆಯ ವಿಕ್ರಮಾದಿತ್ಯನ ಕಾಲದ ತೆಲಸಂಗ ಅಗ್ರಹಾರದಲ್ಲಿ ೫೦೦ ಜನ ಬ್ರಾಹ್ಮಣ ಪಂಡಿತರು

ವಾಸವಾಗಿದ್ದರು. ಅಂದಿನ ಅರಸರು ಈ ಬ್ರಾಹ್ಮಣ ಪಂಡಿತರ ಉಪಬೋೀಗಕ್ಕೆ ಕೊಟ್ಟಂತಹ ಗ್ರಾಮಗಳೇ ಅಗ್ರಹಾರಗಳಾಗಿದ್ದವು ಎಂದು ಹೇಳಬಹದು. ಇದರಿಂದ ಅಗ್ರಹಾರಗಳು ಬಹುಮಟ್ಟಿಗೆ ಪ್ರಾಚೀನ ಶಿಕ್ಷಣ ವ್ಯವಸ್ಥೆಯನ್ನು ನಿಯಂತ್ರಿಸುತ್ತಿದ್ದವೆಂದು ತಿಳಿದುಬರುತ್ತದೆ.

ನಂತರದ ಶಿಕ್ಷಣದ ವ್ಯವಸ್ಥೆ ಬಗ್ಗೆ ಹೆಚ್ಚಿನ ಮಾಹಿತಿಗಳು ಲಭ್ಯವಾಗಿಲ್ಲ. ಮರಾಠರ ಆಳ್ವಿಕೆಯ ಪ್ರಭಾವದಲ್ಲಿ ಅಥಣಿ ಗಡಿ ಭಾಗದಲ್ಲಿ ಅನೇಕ ಮರಾಠಿ ಶಾಲೆಗಳು ಅಸ್ತಿತ್ವಕ್ಕೆ ಬಂದಿದ್ದವು. ಆದ್ದರಿಂದ ಪ್ರಸ್ತುತ ಅಥಣಿ ಪ್ರದೇಶದಲ್ಲಿ ಹೆಚ್ಚು ಮರಾಠಿ ಶಾಲೆಗಳು ಇರುವುದು ಕಂಡುಬರುತ್ತದೆ. ಮೊಗಲ್ ಅಧಿಕಾರಿ ನಿಜಾಮ್ -ಉಲ್-ಮುಲ್ಕನ ಅವಧಿಯಲ್ಲಿ ಈ ಪ್ರದೇಶದ ಶಿಕ್ಷಣ ವ್ಯವಸ್ಥೆ ಬಗ್ಗೆ ಹೆಚ್ಚಿನ ಸಂಶೋಧನೆಗಳು ನಡೆಯಬೇಕಾಗಿವೆ.

ಬ್ರಿಟಿಷರ ಆಳ್ವಿಕೆಯಲ್ಲಿ ಮುಂಬಯಿ ಪ್ರಸಿಡೆನ್ಸಿಯಲ್ಲಿ ಅಥಣಿ ಪರಿಸರದ ಶಿಕ್ಷಣ ವ್ಯವಸ್ಥೆ ಪುನರಚನೆಗೊಂಡಿತು, ಪ್ರಾಚೀನ ಅಗ್ರಹಾರ ಕೇಂದ್ರಗಳೆಲ್ಲ ಕಣ್ಮರೆಯಾಗಿ ಅಥಣಿ ಪಟ್ಟಣ ಶೈಕ್ಷಣಿಕ ಹಾಗೂ ವ್ಯಾಪಾರಿ ಚಟುವಟಿಕೆಯ ಕೇಂದ್ರವಾಯಿತು. ನಂತರ ಈ ಪ್ರದೇಶದಲ್ಲಿ ಅನೇಕ ಶೈಕ್ಷಣಿಕ ಸಂಸ್ಥೆಗಳು ಖಾಸಗಿಯವರ ಒಡೆತನದಲ್ಲಿ ಶಿಕ್ಷಣ ನೀಡುತ್ತಿವೆ ಪ್ರಮುಖ ಶೈಕ್ಷಣಿಕ ಸಂಸ್ಥೆಗಳೆಂದರೆ. ಅಥಣಿ ಹಾಗೂ ಅಥಣಿ ಪರಿಸರದ ಗ್ರಾಮಗಳಲ್ಲಿ ಶಿಕ್ಷಣ ಪ್ರಸಾರವನ್ನು ಕೈಕೊಂಡಿರುವ ಅನೇಕ ಸಂಘ ಸಂಸ್ಥೆಗಳು ಈ ರೀತಿಯಾಗಿವೆ.

೧) ಜಾಧವಜಿ ಆನಂದಜಿ ಶಿಕ್ಷಣ ಸಂಸ್ಥೆ

ತನ್ನಿಂದಲೆ ತಾನು ಆತ್ಮೋನ್ನತಿಯಾಗಬೇಕು ಎಂಬ ಭಗವದ್ಗಿತೆಯ ಶ್ಲೋಕವನ್ನು ತನ್ನ ಧೇಯ ವಾಕ್ಯವನ್ನಿಸಿಕೊಂಡು ೧೯೧೮ ರಲ್ಲಿ ಜಾಧವಜಿ ಶಿಕ್ಷಣ ಸಂಸ್ಥೆ ಸ್ಥಾಪನೆಯಾಯಿತು. (ಚಿತ್ರ ಸಂ.೫) ಪ್ರಥಮದಲ್ಲಿ ೧೯೧೮ ರಲ್ಲಿ ಜಾಧವಜಿ ಆನಂದಜಿ ಹೈಸ್ಕೂಲ ಪ್ರಾರಂಭವಾಯಿತು.[೨] ಅಥಣಿಯ ಹರಿಯ ಉದ್ಯಮಿಗಳಾಗಿದ್ದ ಉದ್ಧವಜಿ ಆನಂದಜಿ ಭಾಟೆ ಇವರು ತಮ್ಮ ಸಹೋದರರಾದ ಜಾಧವಜಿ ಅವರ ಹೆಸರಿನಿಂದ ಈ ಸಂಸ್ಥೆ ಭವ್ಯ ಕಟ್ಟಡ ನಿರ್ಮಿಸಿಕೊಟ್ಟಿದ್ದಾರೆ. ನಂತರ ಡಿ. ಬಿ. ಪವಾರ ದೇಸಾಯಿ, ಕೊಕಟನೂರ ದೇಸಾಯಿ ಹಾಗೂ ಇನ್ನಿತರ ಮಹನೀಯರು ಈ ಸಂಸ್ಥೆಗೆ ಭೂಮಿ ಧಾನ ಮಾಡಿದ್ದಾರೆ. ಇದರಿಂದಾಗಿ ಆಧುನಿಕ ಅಥಣಿ ಪರಿಸರದಲ್ಲಿ ಈ ಸಂಸ್ಥೆ ಮಹತ್ತರವಾಗಿ ಬೆಳೆದಿದೆ. ಇತ್ತೀಚಿಗೆ ಇನಫೋಸಿಸ್ ಸಂಸ್ಥೆ ಬೆಂಗಳೂರು ಇವರ ವತಿಯಿಂದ ಧರ್ಮದರ್ಶಿಗಳಾದ ಶ್ರೀಮತಿ ಸುಧಾಮೂರ್ತಿಯವರು ಜೆ. ಎ. ಪದವಿಪೂರ್ವ ಮಹಾವಿದ್ಯಾಲಯದ ನೂತನ ಕಟ್ಟಡಕ್ಕೆ ೧೧ ಲಕ್ಷಕ್ಕೂ ಮೇಲ್ಪಟ್ಟು ರೂಪಾಯಿಗಳ ಧನ ಸಹಾಯ ಮಾಡಿದ್ದಾರೆ. ಹೀಗೆ ಇನ್ನೂ ಅನೇಕ ಮಹನಿಯರ ಪ್ರೋತ್ಸಾಹ ಹಾಗೂ ಮಾರ್ಗದರ್ಶನದಲ್ಲಿ ಇಂದು ಜಾಧವಜಿ ಶಿಕ್ಷಣ ಸಂಸ್ಥೆಯ ಅಡಿಯಲ್ಲಿ ಅನೇಕ ಹೊಸ ಶಾಲಾ ಕಾಲೇಜುಗಳು ಸ್ಥಾಪನೆಗೊಂಡಿವೆ.

| | | |
|---|---|---|
| ೧) | ಶ್ರೀಮತಿ ಸತ್ವಶೀಲಾದೇವಿ ಹೆಣ್ಣು ಮಕ್ಕಳ ಪ್ರೌಢ ಶಾಲೆ | ೧೯೬೧ |
| ೨) | ಶ್ರೀಮತಿ ಕಮಲಾಬಾಯಿ ಕಾತವಟೆ ಶಿಶು ವಿಹಾರ | ೧೯೬೨ |
| ೩) | ಜೆ. ಎ. ಪದವಿಪೂರ್ವ ಮಹಾವಿದ್ಯಾಲಯ | ೧೯೭೨ |

೪) ಶ್ರೀ ಶ್ರೀನಿವಾಸ ಸಂಸ್ಕೃತ ಪಾಠ ಶಾಲೆ ೧೯೭೮

೫) ಜೆ. ಎ. ಕಿರಿಯ ಪ್ರಾಥಮಿಕ ಶಾಲೆ ೧೯೮೬

೬) ಜೆ. ಎ. ವೃತ್ತಿ ಶಿಕ್ಷಣ ಕೇಂದ್ರ ( ಜೆ. ಓ. ಡಿ.ಸಿ. ) ೧೯೯೨

೭) ಜೆ. ಇ. ಶಿಕ್ಷಣ ಸಂಸ್ಥೆಯ ಶ್ರೀ ಕೆ. ಎ. ಲೋಕಾಪೂರ
ಕಲಾ, ವಿಜ್ಞಾನ ಹಾಗೂ ವಾಣಿಜ್ಯ ಮಹಾವಿದ್ಯಾಲಯ ೨೦೦೪

೮) ಸರಸ್ವತಿ ಸಂಗೀತ ಪಾಠ ಶಾಲೆ ೨೦೦೭

ಹೀಗೆ ಪ್ರಾರಂಭಗೊಂಡ ಈ ಸಂಸ್ಥೆಯು ದಕ್ಷ ಆಡಳಿತ ಮಂಡಳಿಯನ್ನು ಹೊಂದಿದ್ದು ಶ್ರೀಯುತ ಅರವಿಂದರಾವ ಬಾ ದೇಶಪಾಂಡೆ ಇದರ ಕಾರ್ಯಾಧ್ಯಕ್ಷರಾಗಿದ್ದಾರೆ. ೨೦೧೮ ರಲ್ಲಿ ಈ ಸಂಸ್ಥೆ ಶತಮಾನೋತ್ಸವ ಆಚರಿಸಿಕೊಳ್ಳುತ್ತಿರುವದು ಈ ಭಾಗದ ಶೈಕ್ಷಣಿಕ ರಂಗದಲ್ಲಿ ಒಂದು ಮೈಲುಗಲ್ಲಾಗಿದೆ.

೨. ಕರ್ನಾಟಕ ಲಿಂಗಾಯತ ಶಿಕ್ಷಣ ಸಂಸ್ಥೆ (ಕೆ. ಎಲ್. ಇ ಸಂಸ್ಥೆ)

ಶೈಕ್ಷಣಿಕವಾಗಿ ಹಿಂದುಳಿದ ಉತ್ತರ ಕರ್ನಾಟಕದ ಲಿಂಗಾಯತರ ಶೈಕ್ಷಣಿಕ ಅಭಿವೃದ್ಧಿಗಾಗಿ ಕೈಂಕರ್ಯ ತೊಟ್ಟ ಸಪ್ತರ್ಷಿಗಳ ಮಹಾನ ಪ್ರಯತ್ನದ ಫಲದಿಂದ ಕೆ.ಎಲ್. ಇ ಸಂಸ್ಥೆ ೧೯೧೬ರಲ್ಲಿ ಸ್ಥಾಪನೆಯಾಯಿತು. ಪುಣೆಯಲ್ಲಿ ಶಿಕ್ಷಣ ಪಡೆದು ಲೋಕ ಕಲ್ಯಾಣದ ಆದರ್ಶದ ಧಿಕ್ಷೆ ತೊಟ್ಟು ಶ್ರೀ ಶಿ.ಶಿ. ಬಸವನಾಳ, ಬಿ.ಬಿ.ಮಮದಾಪೂರ, ಎಂ. ಆರ್. ಸಾಖರೆ, ಬಿ.ಎಸ್. ಹಂಚನಾಳ, ಎಚ್. ಎಫ್. ಕಟ್ಟಿಮನಿ, ಪಿ.ಆರ್. ಚಿಕ್ಕೋಡಿ, ಎಸ್. ಬಿ, ಪಾಟೀಲ ಇವರೆಲ್ಲರೂ ಸೇರಿ ಪುಣೆಯ ಡೆಕ್ಕಣ ಎಜ್ಯುಕೇಶನ್ ಸೊಸೈಟಿಯ ಮಾದರಿಯಲ್ಲಿ ಬೆಳಗಾವಿಯಲ್ಲಿ ಈ ಸಂಸ್ಥೆಯನ್ನು ಹುಟು ಹಾಕಿದ್ದಾರೆ. ಇವರೆಲ್ಲರನ್ನು ಸಪ್ತರ್ಷಿಗಳೆಂದು ಸಂಬೋಧಿಸಲಾಗಿದೆ. ಪ್ರಾರಂಭದಲ್ಲಿ ಈ ಸಂಸ್ಥೆ ಅನೇಕ ಅಡ್ಡಿ ಆತಂಕಗಳನ್ನು ಎದುರಿಸಿ ಇಂದು ಹೆಮ್ಮರವಾಗಿ ಬೆಳೆದು ಅಂತರಾಷ್ಟ್ರೀಯ ಮಟ್ಟದಲ್ಲಿ ಕೀರ್ತಿ ಪಡೆದ ಜ್ಞಾನ ಪ್ರಸಾರದ ದೇಗುಲವೆಂದು ಹೆಗ್ಗಳಿಕೆ ಪಡೆದಿದೆ. ಕರ್ನಾಟಕದ ತುಂಬೆಲ್ಲಾ ಇದರ ಅಂಗ ಸಂಸ್ಥೆಗಳು ಸ್ಥಾಪನೆಯಾಗಿವೆ.

ಅಥಣಿ ಪರಿಸರದಲ್ಲಿ ಈ ಸಂಸ್ಥೆಯ ಬಿಜಾಂಕುರಕ್ಕೆ ಮೂಲ ಕಾರಣಕರ್ತರು ಷಟ್‌ಸ್ಥಲ ಬ್ರಹ್ಮ ಶ್ರೀ ಬಸವಲಿಂಗ ಮಹಾಸ್ವಾಮೀಗಳು ಹಿರೇಮಠ, ತೆಲಸಂಗ ಇವರು. ಮೊಟ್ಟ ಮೊದಲಿಗೆ ಕೆ.ಎಲ್.ಇ ಸಂಸ್ಥೆ ಅಥಣಿಯಲ್ಲಿ ಈ ಭಾಗದ ಗ್ರಾಮೀಣ ಬಡ ಮಕ್ಕಳಿಗೆ ಶಿಕ್ಷಣ ನೀಡಬೇಕೆಂಬ ಧ್ಯೇಯವನ್ನು ಇಟ್ಟುಕೊಂಡು ನ್ಯೂ ಹಾಯಸ್ಕೂಲವನ್ನು ಪ್ರಾರಂಭಿಸಿತು. ಶ್ರೀ ಚಂಬಣ್ಣ ಕಾವೇರಿ. ಸಿ. ಎಸ್. ಮಂಗಸೂಳಿ, ಶ್ರಿ ಜಿ. ಸಿ. ತೆಲಸಂಗ, ಜಿ. ಜಿ. ಹುಲಕುಂದ, ಮಾಜಿ ಸಂಸದ ಎಸ್. ವ್ಹಿ. ಪಾಟೀಲ, ಡಾ|| ಸಿ.ಎಸ್. ಪಾಂಗಿಯವರ ಅವಿರತ ಶ್ರಮದ ಫಲದಿಂದಾಗಿ ಹೆಮ್ಮರವಾಗಿ ಬೆಳೆದು ನಿಂತಿದೆ. ಪ್ರಸ್ತುತ ಇದು ಲಿಂಗೈಕ ಶ್ರೀ ಚನ್ನಪ್ಪ ಶಿವರುದ್ರಪ್ಪ ಕಿತ್ತೂರವರು ಈ ವಿದ್ಯಾಲಯಕ್ಕೆ ದಾನ ನೀಡಿದರ ಫಲವಾಗಿ ಇಂದು ಈ ಪ್ರೌಢ ಶಾಲೆ ಅವರ ಹೆಸರಿನಿಂದ ಕರೆಯಲ್ಪಡುತ್ತದೆ. (ಸಿ.ಎಸ್.ಕೆ. ಹಾಯಸ್ಕೂಲ).

ಇದೇ ಸಂಸ್ಥೆ ೧೯೬೮ ರಲ್ಲಿ ಶ್ರೀ ಮುರಘೇಂದ್ರ ಶಿವಯೋಗಿಗಳ ಹೆಸರಿನಲ್ಲಿ ಕಲಾ ಮಹಾವಿದ್ಯಾಲವನ್ನು ಆರಂಭಿಸಿತು. ನಂತರ ೧೯೭೦ ರಲ್ಲಿ ವಿಜ್ಞಾನ ಹಾಗೂ ೧೯೭೭ ರಲ್ಲಿ ವಾಣಿಜ್ಯ ವಿಭಾಗಗಳು ಈ ಮಹಾವಿದ್ಯಾಲಯದಲ್ಲಿ ಸೇರಿಕೊಂಡವು.

ಕೆ. ಎಲ್. ಇ. ಸಂಸ್ಥೆಯ ಅಥಣಿ ಪರಿಸರದ ಇತರ ಅಂಗ ಸಂಸ್ಥೆಗಳೆಂದರೆ :

೧. ಕೆ. ಎಲ್. ಇ. ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆ ೧೯೯೮ ರಲ್ಲಿ ಸ್ಥಾಪನೆಯಾಗಿದೆ. ಇದೇ ಶಾಲೆಯಲ್ಲಿ ೨೦೦೭ ರಿಂದ ಸಿ. ಬಿ.ಎಸ್. ಇ. ಪಠ್ಯಕ್ರಮವನ್ನು ಪ್ರಾರಂಭಿಸಿದ್ದಾರೆ.

೨. ಶಿಕ್ಷಣ ಮಾಹಾವಿದ್ಯಾಲಯ (ಬಿ.ಇಡ್) ೨೦೦೫ರಲ್ಲಿ ಪ್ರಾರಂಭವಾಗಿದೆ.

೩. ಡಿ.ಇಡ್ ಮಹಾವಿದ್ಯಾಲಯ ೨೦೦೬ ರಲ್ಲಿ ಪ್ರಾರಂಭವಾಗಿದೆ.

೪. ಕೆ.ಎಲ್. ಇ. ಸಂಸ್ಥೆಯ ಆಯುರ್ವೇದ ಆಸ್ಪತ್ರೆ ಮತ್ತು ಸಂಶೋಧನಾ ಕೇಂದ್ರ ೨೦೦೬ರಲ್ಲಿ ಪ್ರಾರಂಭವಾಗಿದೆ.

ಈ ಸಂಸ್ಥೆಯ ಶೈಕ್ಷಣಿಕ ಕಾರ್ಯಗಳು ಇನ್ನೂ ಗ್ರಾಮೀಣ ಮಟ್ಟದಲ್ಲಿ ಉತ್ತರಕರ್ನಾಟಕದ ಗಡಿಯಲ್ಲಿ ವಿಸ್ತರಣೆಯಾಗುವ ಹಂತದಲ್ಲಿವೆ.

೩. ಆರ್ಝೂದ ಶಿಕ್ಷಣ ಸಂಸ್ಥೆ : ಈ ಸಂಸ್ಥೆ ಮುಸ್ಲಿಂ ಸಮಾಜದ ಮಕ್ಕಳಿಗೆ ಅದರಲ್ಲೂ ವಿಶೇಷವಾಗಿ ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡಬೇಕೆಂದು ಉದಾತ್ತ ಧ್ಯೇಯವನ್ನಿಟ್ಟುಕೊಂಡು ೧೯೬೪ರಲ್ಲಿ ಸ್ಥಾಪನೆಯಾಗಿದೆ. ಶ್ರೀ ಅಲಾಹದ ಸುತುತ್ತಸಾಬ್. ಉಸ್ಮಾನಸಾಬ ಮೋಮಿನ ಹಾಗೂ ಇನ್ನೂ ಅನೇಕ ಮುಸ್ಲಿಂ ಸಮುದಾಯದ ಹಿರಯ ಮುಖಂಡರಿಂದ ಈ ಸಂಸ್ಥೆ ಪ್ರಾರಂಭವಾಯಿತು. ಇದು ಅಬುಲಕಲಾಂ ಬಾಲಕೀಯರ ಪ್ರೌಢ ಶಾಲೆಯನ್ನು ಮೊಟ್ಟಮೊದಲು ಸ್ಥಾಪಿಸಿತು. ನಂತರ ಹಂತಹಂತವಾಗಿ ಬೆಳವಣಿಗೆ ಹೊಂದುತ್ತ ಈ ಸಂಸ್ಥೆಯಡಿಯಲ್ಲಿ ಈ ಕೆಳಗಿನ ಅಂಗಸಂಸ್ಥೆಗಳು ಪ್ರಾರಂಭಗೊಂಡಿವೆ.

೧. ಅಬುಲ್ ಕಲಾಂ ಬಾಲಕಿಯರ ಪ್ರೌಢಶಾಲೆ - ೧೯೬೪ (ಉರ್ದು ಮಾಧ್ಯಮ).

೨. ಅಬುಲ್ ಕಲಾಂ ಪ್ರಾಥಮಿಕ ಶಾಲೆ - ೨೦೦೦ (ಉರ್ದು ಮಾಧ್ಯಮ).

೩. ಅಬುಲ್ ಕಲಾಂ ಸಂಯುಕ್ತ ಪದವಿ ಪೂರ್ವ ಮಹಾವಿದ್ಯಾಲಯ - ೨೦೦೪.

೪. ಅಲ್ ಹಾಜ್ ಅಬ್ದುಲ್ಲಾ ಡಿ. ಇಡ್ ಮಹಾವಿದ್ಯಾಲಯ - ೨೦೦೪ .

ಈ ಶಿಕ್ಷಣ ಸಂಸ್ಥೆಯು ಉರ್ದು ಮಾಧ್ಯಮದಲ್ಲಿ ಶಿಕ್ಷಣ ನೀಡುತ್ತಿದ್ದು ಮುಸ್ಲಿಂ ಮಕ್ಕಳ ಮಾತೃಭಾಷೆಯ ಶಿಕ್ಷಣ ಮಾಧ್ಯಮದ ದಾಹವನ್ನು ಪೊರೈಸುತ್ತಿದೆ. ಇಂದು ಇದು ಅಥಣಿಯ ಪ್ರತಿಷ್ಠಿತ ಶಿಕ್ಷಣ ಸಂಸ್ಥೆಗಳಲ್ಲಿ ಒಂದು ಎಂದು ಹೆಸರುವಾಸಿಯಾಗಿದೆ.

೪. ವಿಮೋಚನಾ ಸಂಘ

ಅಥಣಿ ತಾಲೂಕಿನ ಮಲಾಬಾದ ಗ್ರಾಮದಲ್ಲಿ ೧೯೮೫ ರಲ್ಲಿ ವಿಮೋಚನಾ ವಸತಿ ಪ್ರೌಢಶಾಲೆ ಹಾಗೂ ಪ್ರಾಥಮಿಕ ಶಾಲೆ ಆರಂಭಿಸಿತು. ಶೋಷಿತ, ವಂಚಿತ, ಉನ್ನತ ವರ್ಗದವರ ದೌರ್ಜನ್ಯಕ್ಕೆ ಒಳಗಾಗಿ ಸಮಾಜದ ಮುಖ್ಯ ವಾಹಿನಿಯಿಂದ ಬಹುದೂರ ಉಳಿದಿರುವ ನತದೃಷ್ಟ ದೌರ್ಭಾಗ್ಯ ಮಹಿಳೆಯ ಮತ್ತು ಅವರ ಮಕ್ಕಳ ಸರ್ವಾಂಗೀಣ ಪ್ರಗತಿಯನ್ನು ಗುರಿಯಾಗಿಟ್ಟುಕೊಂಡು ಈ ಸಂಘವು ಸ್ಥಾಪಿತವಾಯಿತು.[೪]

ಈ ಸಂಘದ ವತಿಯಿಂದ ಪ್ರಾರಂಭವಾದ ಶಾಲೆ ದೇವದಾಸಿ ಸಂಪ್ರದಾಯದಲ್ಲಿ ಸಿಲುಕಿದ ಮಹಿಳೆಯರ ಮಕ್ಕಳಿಗಾಗಿ ಅವರ ಸಾಮಾಜಿಕ ಆರ್ಥಿಕ ಸ್ಥಾನಮಾನಗಳನ್ನು ಹೆಚ್ಚಿಸುವುದಕ್ಕಾಗಿ ಶ್ರಮಿಸತ್ತಲಿದೆ. ರಾಷ್ಟ್ರದಲ್ಲಿ ಏಕಮೇವ ಮಾದರಿ ಶಾಲೆ ಎಂಬ ಹೆಗ್ಗಳಿಕೆಗೆ ಪಾತ್ರವಾದ ಈ ಶಾಲೆಯ ಸಂಸ್ಥೆಯ ಅದ್ಭುತ ಕಾರ್ಯ ಸಾಧನೆಯ ಹಿಂದಿನ ಶಕ್ತಿ ಖ್ಯಾತ ನ್ಯಾಯವಾದಿ, ಶಿಕ್ಷಣ ಪ್ರೇಮಿ ಆದರ್ಶ ಸಮಾಜ ಸ್ಥಾಪನೆಗೆ ಕಂಕಣ ಬದ್ಧರಾಗಿ ನಿಂತಿರುವ ಶ್ರೀ. ಬಿ. ಎಲ್. ಪಾಟೀಲರು. ಸಿ.ಸಿ. ಎಫ್. ಸಂಸ್ಥೆಯಿಂದ ಧನ ಸಹಾಯ ಪಡೆದು ದೇಶ ವಿದೇಶಗಳಲ್ಲಿನ ಉದಾರದಾನಿಗಳನ್ನು ಸಂಪರ್ಕಿಸಿ ಅಹೋರಾತ್ರಿ ಶ್ರಮಿಸಿ ಚಿಕ್ಕ ಗ್ರಾಮದಲ್ಲಿ ಸಾಧಕರು ಬೆರಳು ಕಚ್ಚುವಂಥ ಭವ್ಯ ವಿದ್ಯಾ ಮಂದಿರವನ್ನು ಸ್ಥಾಪಿಸಿದ್ದಾರೆ. ೧೯೯೭ ರಲ್ಲಿ ರಾಷ್ಟ್ರೀಯ ಪ್ರಶಸ್ತಿ ಪಡೆದಿದೆ. ೧೯೯೨ ರಲ್ಲಿ ಮಾಧ್ಯಮಿಕ ಶಾಲೆ ಆರಂಭಿಸಿದರೆ ಈಗದು ಉಚಿತ ಶಿಕ್ಷಣ, ಶಿಕ್ಷಣ ಮಹಾವಿದ್ಯಾಲಯದವರೆಗೂ ಬೆಳೆದು ನಿಂತಿದೆ. ಮಕ್ಕಳಿಗೆ ಉಚಿತ ಶಿಕ್ಷಣ ಸಾಮಗ್ರಿ, ಬಟ್ಟೆ, ಊಟ, ವೈದ್ಯಕೀಯ ಸೌಲಭ್ಯಗಳನ್ನು ಒದಗಿಸುತ್ತಿದೆ. ಶರಣ ಸಂಸ್ಕೃತಿಯ ಮಹತಿಯನ್ನು ವಿದ್ಯಾರ್ಥಿಗಳಿಗೆ ಬೋಧಿಸುತ್ತಾ ಶ್ರೀ ದು. ನಿಂ. ಬೆಳಗಲಿಯವರ ಸ್ಮರಣಾರ್ಥ ವಿಸ್ತಾರವಾದ ಗ್ರಂಥಾಲಯ ಸ್ಥಾಪಿಸಿದೆ. ವಿಶಾಲ ಕ್ರೀಡಾಂಗಣ, ಬಯಲು ರಂಗ ಮಂದಿರ ವಿದ್ಯಾರ್ಥಿಗಳ ಸರ್ವತೋಮುಖ ಅಭಿವೃದ್ಧಿಗೆ ಬೇಕಾಗುವ ಎಲ್ಲ ಅನುಕೂಲತೆಗಳು ಇಲ್ಲಿವೆ. ಈಗ ನರ್ಸರಿ ಶಾಲೆ, ವೃತ್ತಿ ಶಿಕ್ಷಣ ಕೋರ್ಸುಗಳು ಶಿಕ್ಷಣಾರ್ಥಿಗಳಿಗೆ ಒದಗಿಸಿದ್ದಾರೆ. ವಿಮೋಚನಾ ಕಂಪ್ಯೂಟರ್ ಶಿಕ್ಷಣ ಕೇಂದ್ರ ಹಾಗೂ ಗೋಟಲೋಬ ಬಿಯಾಂಕಾ ಮಕ್ಕಳ ಪಾರ್ಕು ಇಲ್ಲಿದೆ. ಸರಕಾರ ಮಾಡಲಾಗದ್ದನ್ನು ಈ ಒಂದು ಸಂಸ್ಥೆ ಮಾಡಿರುವದು ಎಂಥವರನ್ನು ಬೆರಗುಗೊಳಿಸುತ್ತದೆ. ಈ ಸಂಸ್ಥೆಯ ಕಾರ್ಯದಾಧಕ ಶ್ರೀ ಬಿ. ಎಲ್. ಪಾಟೀಲರಿಗೆ ಬೆನ್ನೆಲುಬಾಗಿ ಶ್ರೀ ವ್ಹಿ. ಎಸ್. ಮನವಾಡೆ ಇವರು ಸಂಸ್ಥೆಯ ಕನಸುಗಳನ್ನು ನನಸುಗೊಳಿಸುವತ್ತ ಹೆಜ್ಜೆ ಹಾಕುತ್ತಿದ್ದಾರೆ.

೫. ಕೆ. ಆರ್. ಇ. ಶಿಕ್ಷಣ ಸಂಸ್ಥೆ, ಐನಾಪೂರ : (ಕರ್ನಾಟಕ ರೂರಲ್ ಎಜ್ಯುಕೇಶನ್ ಸೊಸಾಯಿಟಿ)

ಧಾರವಾಡದ ಕೆ. ಇ. ಬೋರ್ಡ ೧೯೧೯ರಲ್ಲಿ ಐನಾಪೂರದಲ್ಲಿ ಪ್ರೌಢಶಾಲೆ ಪ್ರಾರಂಭಿಸಿತು. ಇದು ತಾಲೂಕಿನ ಎರಡನೇ ಪ್ರಾಚೀನ ಶಾಲೆ. ೧೯೨೪ ರಲ್ಲಿ ಸ್ಥಳೀಯ ಕೆ. ಆರ್. ಇ. ಸಂಸ್ಥೆ ಇದನ್ನು ವಹಿಸಿಕೊಂಡಿತು. ಇದನ್ನು ಬೆಳೆಸಿದವರು ದಿ. ಜೆ.ಎಂ. ದೇಶಪಾಂಡೆ ಗುರುಗಳು. ಇದೀಗ ಈ ಸಂಸ್ಥೆ ಪ.ಪೂ. ಕಾಲೇಜು, ಡಿ. ಎಡ್. ಕಾಲೇಜು ಹಾಗೂ ಪ್ರಾಥಮಿಕ ಶಾಲೆಗಳಲ್ಲಿ ವಿಸ್ತರಿಸಿದೆ.

೬. ಸನ್ಮತಿ ಶಿಕ್ಷಣ ಸಂಸ್ಥೆ, ಶೇಡಬಾಳ

ಜೈನ ಧರ್ಮದ ಕೇಂದ್ರ ಹಾಗೂ ಸಾಹಿತ್ಯ ಕ್ಷೇತ್ರಕ್ಕೆ ಅಮೂಲ್ಯ ಕೊಡುಗೆಯನ್ನು ನೀಡಿದ ಶೇಡಬಾಳ

ಗ್ರಾಮದಲ್ಲಿ ೧೯೫೧ ರಲ್ಲಿ ಸನ್ಮತಿ ಶಿಕ್ಷಣ ಸಂಸ್ಥೆಯು ಸನ್ಮತಿ ಸಹಕಾರಿ ಸೇವಾ ಸಂಘ ಎಂಬ ಹೆಸರಿನಿಂದ ಪ್ರಾರಂಭವಾಯಿತು. ಕಟ್ಟಡಕ್ಕಾಗಿ ನಿವೇಶನ ಹಾಗೂ ಧನ ಸಹಾಯ ಮಾಡಿದ ಶ್ರೀಯುತ ಸಂ ಘೋರಾಮರು ೨೫ ವರ್ಷಗಳವರೆಗೆ ಸಂಸ್ಥೆಯ ಕಾರಾಧ್ಯಕ್ಷರಾಗಿ ಕಾರ್ಯ ನಿರ್ವಹಿಸಿ ಸಂಸ್ಥೆಯನ್ನು ಬೆಳೆಸಿದರು. ಸನ್ಮತಿ ಶಿಕ್ಷಣ ಸಂಸ್ಥೆ ಸಿ.ಪಿ. ಜಮಖಂಡಿ ಇವರ ದಾನದೊಂದಿಗೆ ಸಮೀಪದ ಉಗಾರದಲ್ಲಿ ಪದ್ಮಾವತಿ ವಿದ್ಯಾಲಯ ಪ್ರಾರಂಭಿಸಿತು.

ಉಗಾರ ಖುರ್ದದ ಶುಗರ್ ವರ್ಕ್ಸ ಲಿಮಿಟೆಡ್ ವತಿಯಿಂದ ಶ್ರೀ ಹರಿ ವಿದ್ಯಾಲಯ ಪ್ರೌಢಶಾಲೆ ಹಾಗೂ ಪ್ರಾಥಮಿಕ ಶಾಲೆ ಆರಂಭವಾಗಿ ಶಿಸ್ತು ದಕ್ಷತೆಗೆ ಹೆಸರು ಪಡೆದಿದೆ. ಶ್ರೀ ಬಾಬುಕಾಕಾ ಶಿರಗಾವಂಕರ ಅವರು ಉಗಾರದಲ್ಲಿ ಕನ್ನಡ ಮರಾಠಿ ಮಾಧ್ಯಮಿಕ ಶಾಲೆಗಳನ್ನು ಸ್ಥಾಪಿಸಿ ಉಗಾರದ ಸರ್ವತೋಮುಖ ಬೆಳವಣಿಗೆಗೆ ಕಾರಣರಾದರು. ಈಗ ಸರಕಾರಿ ಕನ್ನ ಡ, ಮರಾಠಿ ಮಾಧ್ಯಮ ಶಾಲೆಗಳು, ಪದವಿ ಪೂರ್ವ, ಪದವಿ ಮಹಾವಿದ್ಯಾಲಯಗಳು ಸ್ಥಾಪನೆಗೊಂಡಿವೆ.

೭. ಜಿ. ಎನ್. ಕೆ. ಪ್ರೌಢಶಾಲೆ ಸತ್ತಿ

ಅಥಣಿ ಸಮೀಪದ ಸತ್ತಿ ಗ್ರಾಮದಲ್ಲಿ ವಿದ್ಯಾವರ್ಧಕ ಸಮಿತಿಯಿಂದ ೧೯೬೫ ರಲ್ಲಿ ಜಿ. ಎನ್. ಕೆ. ಪ್ರೌಢಶಾಲೆ ಆರಂಭವಾಯಿತು. ಈ ಶಾಲೆ ಆರಂಭವಾಗಲು ಪ್ರಯತ್ನಿಸಿ ಉದಾರ ದಾನ ನೀಡಿದವರು ನಾಗಪ್ಪನವರ ಬಂಧುಗಳು. ೧೯೯೪ ರಲ್ಲಿ ಪ್ರೌಢಶಾಲೆ ತನ್ನ ದೇ ಆದ ಕಟ್ಟಡೆದೊಂದಗೆ ಜಿ. ಎನ್. ಕೆ. ಪ್ರೌಢಶಾಲೆ ಎಂದು ನಾಮಕರಣ ಹೊಂದಿತು.

೮. ಬಸವೇಶ್ವರ ಶಿಕ್ಷಣ ಸಂಸ್ಥೆ, ಅನಂತಪೂರ

ಅನಂತಪೂರ ಗ್ರಾಮದಲ್ಲಿ ೧೯೬೮ ರಲ್ಲಿ ಶ್ರೀ ಬಸವೇಶ್ವರ ಶಿಕ್ಷಣ ಸಂಸ್ಥೆ ನ್ಯೂ ಹೈಸ್ಕೂಲ ಪ್ರಾರಂಭಿಸಿತು. ನಂತರ ೧೯೮೫ ರಲ್ಲಿ ಪದವಿ ಪೂರ್ವ ಮಹಾವಿದ್ಯಾಲಯ ನಂತರ ವೃತ್ತಿ ಶಿಕ್ಷಣ (ಜೆ.ಓ.ಡಿ.ಸಿ) ವಿಭಾಗಗಳು ವಿದ್ಯಾರ್ಥಿನಿಯರಿಗಾಗಿ ಪ್ರತ್ಯೇಕ ಪ್ರೌಢಶಾಲೆ ಪ್ರಾರಂಭವಾದವು. ಈ ಬೆಳವಣಿಗೆಗೆ ಕರ್ತರಾಗಿದ್ದಾರೆ.

ಇದೇ ಗ್ರಾಮದಲ್ಲಿ ಶ್ರೀ ಮಲ್ಲಿಕಾರ್ಜು ಶೈಕ್ಷಣಿಕ ಮತ್ತು ವಿವಿಧೋದ್ದೇಶಗಳ ಸಂಘ ೨೦೦೦ ರಲ್ಲಿ ಕನ್ನಡ ಮಾಧ್ಯಮಿಕ ಪ್ರಾಥಮಿಕ ಶಾಲೆ ಆರಂಭಿಸಿದೆ. ಶ್ರೀ ಎನ್. ಎ. ಪಾಟೀಲ ಇವರಿಂದ ಸ್ಥಾಪಿತಗೊಂಡು ಎಲ್. ಕೆ. ಜಿ. ಯಿಂದ ೫ ನೇ ತರಗತಿಯವರೆಗೆ ಶಿಕ್ಷಣ ನಿಡುತ್ತಿದೆ.

೯. ಮಹಾತ್ಮಾ ಗಾಂಧೀಜಿ ಶಿಕ್ಷಣ ಸಂಸ್ಥೆ, ತೆಲಸಂಗ

೧೯೬೮ ರಲ್ಲಿ ಊರಿನ ಹಲವು ಗಣ್ಯರು ವಿಧ್ಯಾದಾನದ ದೀಕ್ಷೆ ತೊಟ್ಟು ತೆಲಸಂಗ ಗ್ರಾಮದಲ್ಲಿ ಹಿರೇಂತದ ಲಿಂಗೈಕ್ಯ ಶ್ರೀ ಷ.ಬ್ರ. ಬಸವಲಿಂಗ ಪಟ್ಟದ ದೇವರು ಮೊದಲಾದ ಗಣ್ಯರ ಆಡಳಿತದಲ್ಲಿ ಶ್ರೀ ಬಸವೇಶ್ವರ ವಿದ್ಯಾವರ್ಧಕ ಸಂಘ ಆರಂಭಿಸಿದರು. ನಂತರ ೩೦-೦೫-೧೯೬೯ ರಲ್ಲಿ ಮಹಾತ್ಮಾ ಗಾಂಧಿ ಸಂಸ್ಥೆಯಾಗಿ ರೂಪುಗೊಂಡು ಪ್ರೌಢ ಶಾಲೆ ಜನ್ಮ ತಾಳಿತು. ಈ ಶಾಲೆ ಸರಕಾರದ ಅನುದಾನಕ್ಕೆ ಒಳಪಟ್ಟು ಸ್ಥಳೀಯ ಗಣ್ಯರ ಪ್ರಯತ್ನದೊಂದಿಗೆ ಪದವಿ ಪೂರ್ವ ಮಹಾವಿದ್ಯಾಲಯ ಕೂಡ ಪ್ರಾರಂಭವಾಗಿದೆ. ಇಲ್ಲಿ ಒಂದು ಪ್ರಸಾದ ನಿಲಯವು ಇದೆ.

೧೦. ಶ್ರೀ ಮಲ್ಲಿಕಾರ್ಜುನ ಆಶ್ರಮ ಟ್ರಸ್ಟ್, ಕಾಗವಾಡ

ಕಾಗಾವಾಡದಲ್ಲಿ ಶ್ರೀ ಮಲ್ಲಿಕಾರ್ಜುನ ಆಶ್ರಮ ಟ್ರಸ್ಟಿನ ವತಿಯಿಂದ ಶಿವಾನಂದ ಕಲಾ-ವಾಣಿಜ್ಯ ಮಹಾವಿದ್ಯಾಲಯವು ೧೯೬೭ ರಲ್ಲಿ ವೇದಾಂತ ಕೇಸರಿ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳಿಂದ ಸ್ಥಾಪನೆಯಾಯಿತು. ಆ ಭಾಗದಲ್ಲಿ ಪ್ರತಿಷ್ಠಿತ ಮಹಾವಿದ್ಯಾಲಯವಾಗಿ ನ್ಯಾಕ್ ಮಾನ್ಯತೆ ಪಡೆದುಕೊಂಡಿದೆ. ಶ್ರೀ ಸಿದ್ದೇಶ್ವ ಮಹಾಸ್ವಾಮಿಗಳು ಇದರ ಅಧ್ಯಕ್ಷರು.

೧೧. ಶಿಕ್ಷಣ ಪ್ರಸಾರಕ ಮಂಡಳ, ರಾಯಭಾಗ : (ಮಧಬಾವಿ)

ಶ್ರೀ ವಸಂತರಾವ ಪಾಟೀಲ (ಅಬಾ) ಅವರು ರಾಯಬಾಗದಲ್ಲಿ ಸ್ಥಾಪಿಸಿದ ಶಿಕ್ಷಣ ಪ್ರಸಾರಕ ಮಂಡಳಿಯು ೧೯೭೪ ರಲ್ಲಿ ಪ್ರೌಢಶಾಲೆಯ ಆರಂಭಿಸಿತು. ಅದು ಮದಭಾವಿ ಗ್ರಾಮದಲ್ಲಿ ೧೯೮೩ರಲ್ಲಿ ಸಂಯುಕ್ತ ಪದವಿ ಪೂರ್ವ ಮಹಾವಿದ್ಯಾಲಯವಾಗಿ ಬೆಳೆಯಿತು. ಕೃಷಿ ಕುಟುಂಬಗಳಿಂದ ಬರುವ ಈ ಭಾಗದ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ೧೯೮೮ ರಲ್ಲಿ ವೃತ್ತಿಪರ ರೇಷ್ಮೆ ತರಬೇತಿ ಕೋರ್ಸನ್ನು ಆರಂಭಿಸಿತು. ೨೦೦೬ ರಲ್ಲಿ ಕಲಾ ಪದವಿ ಮಹಾವಿದ್ಯಾಲಯವು ಪ್ರಾರಂಭಗೊಂಡು ಈ ಭಾಗದ ವಿದ್ಯಾರ್ಥಿಗಳಿಗೆ ಶಿಕ್ಷಣ ಸೌಲಭ್ಯವನ್ನು ಒದಗಿಸಿ ಕೊಟ್ಟಿದೆ. ಇದೇ ಶಿಕ್ಷಣ ಸಂಸ್ಥೆ ೧೯೮೨ ರಲ್ಲಿ ಗುಂಡೇವಾಡಿಯಲ್ಲಿ ಪ್ರೌಢಶಾಲೆ ತೆರೆದಿದೆ.

೧೨. ಶ್ರೀ ಅಪ್ಪಯ್ಯ ಸ್ವಾಮಿ ಶಿಕ್ಷಣ ಸಂಸ್ಥೆ, ಐಗಳಿ

ಅಪ್ಪಯ್ಯ ಸ್ವಾಮಿಗಳ ಪುಣ್ಯ ಕ್ಷೇತ್ರವಾದ ಐಗಳಿಯಲ್ಲಿ ೧೯೬೪ ರಲ್ಲಿ ಪ್ರಾರಂಭಗೊಂಡ ಈ ಸಂಸ್ಥೆಯ ಸ್ಥಾಪಕರು ಶ್ರೀ ಅಗ್ರ್ಯಾಣಯ್ಯ ಹಿರೇಮಠ, ಮೊದಲು ಪ್ರೌಢಶಾಲೆ ಪ್ರಾರಂಭವಾಗಿದ್ದು ಇದು ಸರಕಾರದ ಅನುದಾನಕ್ಕೆ ಒಳಪಟ್ಟ ಸಂಸ್ಥೆಯಾಗಿದೆ. ನಂತರ ಪ್ರಾಥಮಿಕ ಹಾಗೂ ಪದವಿ ಪೂರ್ವ ಮಹಾವಿದ್ಯಾಲಯಗಳು ಪ್ರಾರಂಭಗೊಂಡಿವೆ. ಗ್ರಾಮೀಣ ಪ್ರದೇಶದಲ್ಲಿಯ ಉತ್ತಮ ಸಂಸ್ಥೆಯೆಂಬ ಹೆಗ್ಗಳಿಕೆಯೂ ಇದಕ್ಕಿದೆ. ಡಾ॥ ಗುರುಬಸಯ್ಯಾ ಅಗ್ರ್ಯಾಣಯ್ಯ ಹಿರೇಮಠ ಈಗ ಈ ಸಂಸ್ಥೆಯ ಅಧ್ಯಕ್ಷರಾಗಿದ್ದಾರೆ.



೧೩. ಶಿರಗುಪ್ಪಿ

ಈ ಗ್ರಾಮದಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ ಪ್ರಾರಂಭಗೊಂಡ ಶಾಲೆಗಳಿವೆ. ೧೮೮೧ ರಲ್ಲಿ ಪ್ರಾರಂಭೆಗೊಂಡ ಮರಾಠಿ ಶಾಲೆ. ಸ್ವಾತಂತ್ರ್ಯನಂತರ ೧೯೫೨ ರಲ್ಲಿ ಕನ್ನಡ ಪ್ರಾಥಮಿಕ ಶಾಲೆ ಪ್ರಾರಂಭವಾಗಿದ್ದು ಈಗ ಸ್ವಂತ ಕಟ್ಟಡವನ್ನು ಹೊಂದಿದೆ. ೧ ರಿಂದ ೭ನೇ ತರಗತಿಯವರೆಗೆ ವ್ಯಾಸಂಗ ಮಾಡಲು ಅವಕಾಶವಿದೆ.

ಸರಕಾರಿ ಶಾಲೆಗಳಲ್ಲದೆ ಕೆಲವು ಸಂಘ ಸಂಸ್ಥೆಗಳಿಂದ ಸ್ಥಾಪನೆಯಾದ ಶಾಲೆಗಳು ಇಲ್ಲಿವೆ. ೧೯೫೬ ಕೆ.ವಿ.ವಿ.ಎಸ್ ಸಮಿತಿಯವರಿಂದ ಕಾಗವಾಡ ವಿದ್ಯಾವರ್ಧಕ ಸಮಿತಿಯ ಪ್ರೌಢಶಾಲೆ ಪ್ರಾರಂಭಗೊಂಡಿದೆ. ೧೯೮೯ ರಲ್ಲಿ ಸಿದ್ಧೇಶ್ವರ ವಿದ್ಯಾಲಯ ಶಿರಗುಪ್ಪಿ ೮ ರಿಂದ ೧೦ ನೇ ತರಗತಿಯವರೆಗೆ ಕನ್ನಡ ಹಾಗೂ ಮರಾಠಿ ಮಾಧ್ಯಮದಲ್ಲಿ ಶಿಕ್ಷಣ ನೀಡುವ ಸೌಲಭ್ಯ ಹೊಂದಿದೆ.

ನಪೀಠ ಶಿಕ್ಷಣ ಸಮಿತಿಯವರಿಂದ ಮಾಡರ್ನ್ ಇಂಗ್ಲೀಷ್ ಶಾಲೆ ಹಾಗೂ ಅರಿಹಂತ ಶಿಕ್ಷಣ ಸಂಸ್ಥೆ ಪ್ರಾರಂಭಗೊಂಡವು. ವಿದ್ಯಾನಂದ ಪ್ರಾಥಮಿಕ ಶಾಲೆ ಇಲ್ಲಿದೆ. ಇಲ್ಲಿ ಸರಕಾರದಿಂದ ನಡೆಸಲ್ಪಡುವ ಉರ್ದು ಶಾಲೆಗಳಲ್ಲದೆ ಎಸ್.ಡಿ.ಎಂ.ಸಿ ಸಂಸ್ಥೆಯಿಂದಲೂ ಉರ್ದು ಶಾಲೆಗಳು ಪ್ರಾರಂಭಗೊಂಡಿವೆ.

೧೪. ಮಂಗಾವತಿ

ಅಥಣಿ ತಾಲೂಕಿನ ಈ ಗ್ರಾಮದಲ್ಲಿ ೧೯೪೨ ರಲ್ಲಿ ಪ್ರಾರಂಭಗೊಂಡ ಪ್ರಾಥಮಿಕ ಶಾಲೆ ೧ ರಿಂದ ೪ ನೇ ತರಗತಿಯವರೆಗೆ ಶಿಕ್ಷಣ ಪಡೆಯಲು ಅವಕಾಶವಿತ್ತು. ನಂತರ ೧೯೫೪ ರಲ್ಲಿ ೭ ನೇ ತರಗತಿಯವರೆಗೆ ವ್ಯಾಸಂಗ ಮಾಡಲು ಅವಕಾಶವಿದೆ.

೧೫. ಅಶೋಕ ಶಿಕ್ಷಣ ಪ್ರಸಾರಕ ಮಂಡಳ, ಮೋಳೆ ೧೯೬೪

ಅಥಣಿ ತಾಲೂಕಿನ ಮೋಳೆ ಗ್ರಾಮದಲ್ಲಿ ೧೯೬೪ ರಲ್ಲಿ ಶ್ರೀ ಸಿದ್ದೇಶ್ವರ ಫ್ರೌಢಶಾಲೆ ಪ್ರಾರಂಭವಾಗಿ ಗ್ರಾಮೀಣ ಪ್ರದೇಶದಲ್ಲಿ ಶಿಕ್ಷಣ ನೀಡುತ್ತಿರುವ ಪ್ರಮುಖ ಸಂಸ್ಥೆಯಾಗಿದೆ. ಇಂದು ಈ ಸಂಸ್ಥೆ ಶಿಕ್ಷಣ ಕ್ಷೇತ್ರದಲ್ಲಿ ಅಗಾಧ ಸಾಧನೆ ಮಾಡಿದೆ.

ಮಂಗಸೂಳಿ, ಕೃಷ್ಣಾ ಕಿತ್ತೂರ, ತೀರ್ಥ, ಹಲ್ಯಾಳ, ಬಳ್ಳಿಗೇರಿ, ಕಟಗೇರಿ, ಶಿರಹಟ್ಟಿ, ಕೊಕಟನೂರ, ರಡ್ಡೇರಹಟ್ಟಿ , ನಂದೇಶ್ವರ ಈ ಗ್ರಾಮಗಳಲ್ಲಿ ಖಾಸಗಿ ಶಾಲೆಗಳಿವೆ. ಅಥಣಿಯಲ್ಲಿ ಇನ್ನೂ ಹಲವಾರು ತರಬೇತಿ ಶಿಕ್ಷಣ ಕೇಂದ್ರಗಳು ಸ್ಥಾಪನೆಗೊಂಡಿವೆ. ಆಸ್ತಿ

## ಅಥಣಿ ಪರಿಸರದ ಸಾಹಿತ್ಯ ಪರಂಪರೆ

ನಾಡಿನ ಸಾಂಸ್ಕೃತಿಕ ರೂವಾರಿಗಳೆಂದು ಕರೆಯಿಸಿಕೊಳ್ಳುವ ಕವಿ ಸಾಹಿತಿ, ಕಲಾವಿದ ಹಾಗೂ ಸಂಶೋಧಕರು ಆಯಾ ನಾಡಿನ ಬಹುದೊಡ್ಡ ಆಸ್ತಿ. ಅವರೆಲ್ಲ ಆರೋಗ್ಯಪೂರ್ಣ ಸಮಾಜ ರಚನೆಯ ಅಧ್ವರ್ಯುಗಳು. ಹೀಗಾಗಿ ಅವರು ಜಾತ್ಯಾತೀತರೂ ಹೌದು, ಸೀಮಾತೀತರೂ ಹೌದು. ಆದರೆ ಲೆಕ್ಕಣಿಕೆಗೆ ಪ್ರೇರಣೆ ನೀಡಿದ ಹುಟ್ಟೂರು ಹಾಗೂ ಅವರು ನೆಲೆಸಿದ ಪರಿಸರವನ್ನು ಮರೆಯುವಂತಿಲ್ಲ. ಅವರವರ ಸಾಹಿತ್ಯದ ಅವಲೋಕನ ಮಾಡುವಲ್ಲಿ ಅವು ತುಂಬ ಸಹಕಾರಿಯಾಗಬಲ್ಲವು. ಈ ನಿಟ್ಟಿನಲ್ಲಿ ನೋಡಿದಾಗ ಅಥಣಿ ಪರಿಸರದಲ್ಲಿ ಸಮೃದ್ಧವಾದ ಸಾಹಿತ್ಯ ಕೃಷಿ ನಡೆದಿರುವುದು ಕಂಡುಬರುತ್ತದೆ.

ಸಾಹಿತ್ಯ ಹಾಗೂ ಸಂಸ್ಕೃತಿ ಒಂದೇ ನಾಣ್ಯದ ಎರಡು ಮುಖಗಳು. ಅಥಣಿ ಪರಿಸರದಲ್ಲಿ ಹಿಂದಿನ ಕಾಲದ ಇತಿಹಾಸದ ಮೇಲೆ ಇನ್ನೂ ಹೆಚ್ಚಿನ ಬೆಳಕು ಚೆಲ್ಲಬೇಕಾಗಿದೆ. ಅಪ್ರಕಟಿತ ಶಾಸನಗಳು ಇಲ್ಲಿ ಹೇರಳವಾಗಿವೆ. ಬಳ್ಳಿಗೇರಿ, ಕೊಕಟನೂರ, ತೆಲಸಂಗ, ಸತ್ತಿ, ಸವದಿ, ಮದಭಾವಿ, ಶೇಡಬಾಳ, ಐನಾಪೂರ, ಕೋಹಳ್ಳಿ, ಅಥಣಿ ಮುಂತಾದ ಪ್ರಾಚೀನ ಸ್ಥಳಗಳ ಇತಿಹಾಸವನ್ನು ಶೋಧಿಸಬೇಕಾಗಿದೆ. ಹೀಗಾಗಿ ಹಿಂದಿನ ಕಾಲದ ಕವಿ, ಸಾಹಿತಿಗಳನ್ನು ಗುರ್ತಿಸುವುದು ಅಸಾಧ್ಯವಾಗಿದೆ. ಸುಮಾರು ಎರಡು ಶತಮಾನದ ಸಾಹಿತ್ಯಿಕ ಇತಿಹಾಸವನ್ನು ಇಲ್ಲಿ ಕಾಣಬಹುದಾಗಿದೆ.

'ಕೋವೂರ ಬೊಮ್ಮಯ್ಯನೆಂಬ ಶರಣ ಕೋಹಳ್ಳಿಯವನಂತೆ' ಕವಿ ಹರಿಹರ ಈತನನ್ನು ಕುರಿತು ರಗಳೆಯನ್ನು ರಚಿಸಿರುವನು. ಆತ ಅಂಬುದಾರಾ ರಾಮನಾಥ ಭಕ್ತನೆಂದು ಹರಿಹರ ಬಣ್ಣಿಸಿದ್ದಾನೆ. ಅಂಬುಧಾರಾ ರಾಮನಾಥ ಸಮೀಪದ 'ರಾಮ ತೀರ್ಥ' ವೇ ಆಗಿರಬೇಕು. ಕ್ರಿ.ಶ. ೧೧೧೫ರ ಅಲ್ಲಿಯ ಶಾಸನದಲ್ಲಿ ತೀರ್ಥದ ರಾಮೇಶ್ವರನ ಪ್ರಸ್ತಾಪವಿದೆ. ಈ ಕುರಿತು ಇನ್ನೂ ಹೆಚ್ಚಿನ ಸಂಶೋಧನೆ ನಡೆಯಬೇಕು.

ಶರಣ ಕೋವುರ ಬೊಮ್ಮಯ್ಯ ಹಾಗೂ ಆತನ ಮಗ ಮಲ್ಲದೇವ (ಭೀಮಯ್ಯ) ರ ವಚನಗಳನ್ನು ಹುಡುಕಬೇಕು.

**ಜನಪದ ಕವಿಗಳು**

ಜನಪದ ಸಾಹಿತ್ಯದ ಅನೇಕ ಗಣಿಗಳು ಇಲ್ಲಿವೆ. ಇಲ್ಲಿಯ ಜನಪದ ಕವಿಗಳ ಲಾವಣಿ, ಮೋಹರಂ ಪದ, ಡೊಳ್ಳಿನ ಹಾಡು ಉತ್ತರ ಕರ್ನಾಟಕದ ತುಂಬೆಲ್ಲ ಹರಡಿಕೊಂಡಿವೆ. ತಾವಂಶಿ, ಬೆವನೂರ,ಅಥಣಿ, ಮಲಾಬಾದ, ಬಳ್ಳಿಗೇರಿ, ಶಿವನೂರು ಮತ್ತು ಬಡಚಿ ಲಾವಣಿಗಳ ತೊಟ್ಟಿಲು. ತಾವಂಶಿಯ ಶಿವಪ್ಪ ರಣಧೀರ ಪ್ರಸಿದ್ಧ ಹರದೇಶಿ ಲಾವಣಿಕಾರ. ಇವರು ಅಥಣಿ ತಹಶೀಲ್ದಾರರ ಸಮ್ಮುಖದಲ್ಲಿ 'ನೆಹರು' ಕುರಿತು ರಚಿಸಿದ ಲಾವಣಿಯನ್ನು ಹಾಡಿದನಂತೆ. ಆಗ ತಹಶೀಲ್ದಾರರು ತಮ್ಮ ಕೊರಳಲ್ಲಿದ್ದ ಒಂದು ತೋಲಿ ಚಿನ್ನದ ಸರವನ್ನು ಅವನ ಕೊರಳಿಗೆ ಹಾಕಿ ಬೆನ್ನು ತಟ್ಟಿದರೆಂದು ಜನ ಕಥೆ ಮಾಡಿ ಹೇಳುತ್ತಾರೆ.

ಮಲಾಬಾದದ ಮಲ್ಲಪ್ಪ ಕುಂಬಾರ, ಬಾಳಿಗೇರಿಯ ಅಪ್ಪಣ್ಣ ಸನದಿ, ಸಾತಯ್ಯ ಸ್ವಾಮಿ, ಬೆವನೂರಿನ ಯಮನಪ್ಪ ಕಾಂಬಳೆ, ವಸಂತ ಹೊಸಮನಿ, ಅವರಖೋಡದ ಪತ್ತಾರ ಮಾಸ್ತರ, ಅನಂತಪೂರದ ಛತ್ರಪ್ಪ ಸವಾಯಿ, ತಂಗಡಿ ಬಾಬು, ಶಿವನೂರಿನ ಬಾಳು ಸವದಿ, ವಿರೂಪಾಕ್ಷ, ಅಡಹಳ್ಳಿ, ಜಂಬಗಿಯ ಆನಂದ ಮಾಳಿ, ಯಶವಂತ ಗೋಪಾಳಗೋಳ (ಕಾಟಕರ) ಈ ನಾಡಿನ ಸುಪ್ರಸಿದ್ಧ ಜನಪದ ಲಾವಣಿಕಾರರು. ಮುರಳಿ ಸೂರ್ಯವಂಶಿ, ಶ್ಯಾಮ ಗಾಡಿ ವಡ್ಡರ, ಸತ್ಯಣ್ಣ ಮಾದರ, ಸಿದ್ಧರಾಮ ಬೈರಿ, ಉಗ್ರ ಮೂರ್ತಿ ಬಾಬು ವಸ್ತಾದ, ನರಸಿಂಗ ಮಾಳಿ ಇವರೆಲ್ಲರೂ ಅಥಣಿಯವರು.

ಗೋವಿಂದ ಘುಳಿ ಶಿವನೂರು ಗ್ರಾಮದ ಕರಣಿಕನಾಗಿದ್ದ. ದಪ್ತರ ತುಂಬೆಲ್ಲ ಲಾವಣಿಗಳನ್ನೇ ಬರೆದಿದ್ದನಂತೆ. ಪುಟ ತಿರುಗಿದರೆ 'ಗೋವಿಂದ ಘುಳಿ ಮಾಡ್ಯಾನ ಕವಿ' ಎಂಬ ಚರಣವೇ ಕಾಣುತ್ತಿತ್ತಂತೆ. ಐಗಳಿಯ ದ್ಯಾವಣ್ಣ ಮಾದರ ಎರಡೂ ಕಣ್ಣು ಕಳೆದುಕೊಂಡಿದ್ದ ಕುರುಡ. ಇವರೆಲ್ಲರೂ ಇಲ್ಲಿಯ ಜನಪದ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಶಿವನೂರ ಬಳ್ಳಿಗೇರಿ,ಮಲಾಬಾದ, ಅಥಣಿ, ತಾವಂಶಿಯ ಲಾವಣಿ ಪರಂಪರೆಯ ಕುರಿತು ವಿಸ್ತೃತ ಅಧ್ಯಯನ ಕೈಕೊಳ್ಳುವ ಅವಶ್ಯಕತೆಯಿದೆ.

<u>**ಕವಿ, ಸಾಹಿತಿಗಳು :**</u>

**ಶ್ರೀ ಗಂಗಾಧರ ಮಡಿವಾಳೇಶ್ವರ ತುರಮರಿ : ( ೧೮೨೭-೭೭)**

ಶಬ್ದಮಣಿ ದರ್ಪಣ ವ್ಯಾಖ್ಯಾನ, ಕವಿತಾ ಸಂಗ್ರಹ, ಕೈವಲ್ಯ ಪದ್ಧತಿ ಟೀಕೆ, 'ಬಾಣ' ಕಾದಂಬರಿಯ ಸರಸ ಸಂಗ್ರಹಾನುವಾದಗಳನ್ನು ಕನ್ನಡ ಸಾರಸ್ವತಲೋಕಕ್ಕೆ ನೀಡಿದ್ದಾರೆ. ಅವರು ಕೆಲವು ಕಾಲ ಅಥಣಿಯಲ್ಲಿದ್ದರು.

**ಶ್ರೀಮಲ್ಲಿಕಾರ್ಜುನ ಶಿವಲಿಂಗಪ್ಪ ರೈನಾಪುರ : ( ೧೮೮೦-೧೯೫೪)**

'ಶಿವಲಿಂಗತನಯ' ಎಂಬುದು ಇವರ ಕಾವ್ಯನಾಮ. ಮೂಲತಃ ಸೌದತ್ತಿ ತಾಲೂಕಿನ ರೈನಾಪುರ

ಗ್ರಾಮದವರಾದ ಇವರು ಬಿ.ಎ. ಪದವೀಧರರು. ಕಂದಾಯ ಇಲಾಖೆಯಲ್ಲಿ ಕಾರ್ಯನಿರ್ವಹಿಸಿ ಅಥಣಿಯಲ್ಲಿ ಶಿರಸ್ತೇದಾರರಾಗಿ ನಿವೃತ್ತರಾಗಿ ಇಲ್ಲಿಯೇ ನೆಲಸಿದರು.

'ಲಿಂಗರಾಜ ವಿಜಯ' ಚಂಪೂ ಕಾವ್ಯದಲ್ಲಿ ಬರೆದಿದ್ದಾರೆ. ಕವಿರತ್ನ ಕಾಳಿದಾಸನ ಸಂಸ್ಕೃತ ಕೃತಿಯಾದ ಮೇಘದೂತವನ್ನು ವಾರ್ಧಕ ಷಟ್ಪದಿಯಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಅಲ್ಲದೆ ಶಾಕುಂತಲ ನಾಟಕವನ್ನು ಕನ್ನಡೀಕರಿಸಿದ್ದಾರೆ. ಶ್ರೀರೈನಾಪುರ ಅವರು ಕನ್ನಡ, ಸಂಸ್ಕೃತ ಇಂಗ್ಲೀಷ ಭಾಷೆಗಳಲ್ಲಿ ಉದ್ದಾಮ ಪಂಡಿತರು.

ಶ್ರೀ ಮನೋಹರ ಶ್ರೀನಿವಾಸ ದೇಶಪಾಂಡೆ : (೧೮೯೯-೨೯.೭.೧೯೯೦ )

ಚತುರ್ಭಾಷಾ ವಿಶಾರದರು, ೨೪ ಕೃತಿಗಳನ್ನು ರಚಿಸಿರುವರು. ಅಥಣಿ ತಾಲೂಕಿನ ಸಂಬರಗಿ ಗ್ರಾಮದವರು. ಎಂ.ಎ. ಪದವೀಧರರು. "Light Of India" ಮತ್ತು "Gospel of God Realization" ಮೊದಲಾದ ಕೃತಿಗಳು ಮುಂಬಯಿಯ ಭಾರತೀಯ ವಿದ್ಯಾಭವನದಿಂದ ಪ್ರಕಟವಾಗಿವೆ. ವೀರಶೈವ ತತ್ವಗಳನ್ನು ಆಳವಾಗಿ ಅಭ್ಯಾಸ ಮಾಡಿದ್ದರು. ಬಸವಣ್ಣ, ಅಕ್ಕಮಹಾದೇವಿ, ಅಲ್ಲಮ ಪ್ರಭುದೇವರ ಕುರಿತು ಅನೇಕ ಲೇಖನಗಳನ್ನು ಬರೆದಿರುವರು. ''ಬಸವಣ್ಣನವರ ದಿವ್ಯ ಜೀವನ'' ಕೃತಿಗೆ ಪ್ರಶಸ್ತಿಯನ್ನು ಪಡೆದಿರುವರು.

ಬೆಳಗಾವಿ ಜಿಲ್ಲೆಯ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ :

ಇದನ್ನು ಸಂಘಟಿಸಿದ ಕೀರ್ತಿ ಅಥಣಿ ತಾಲೂಕಿಗೆ ಸಲ್ಲುತ್ತದೆ. ಮನೋಹರ ದೇಶಪಾಂಡೆ ಹಾಗೂ ಬಾಬಾಸಾಹೇಬ ಸಂಗೋರಾಮ ಜಿಲ್ಲಾಮಟ್ಟದ ಸಾಹಿತ್ಯ ಸಮ್ಮೇಳನವನ್ನು ಅಥಣಿಯ ಸೋಲಾಪುರಕರ ಚಿತ್ರಮಂದಿರದಲ್ಲಿ ೧೯೩೪ ರಲ್ಲಿ ನೆರವೇರಿಸಿದರು.[೫] ಕನ್ನಡದ ಕಣ್ವಬಿ. ಎಂ. ಶ್ರೀ ಈ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದರು. ಕವಿಗೋಷ್ಠಿಯ ಅಧ್ಯಕ್ಷತೆವಹಿಸಿದ್ದ ದ.ರಾ. ಬೇಂದ್ರೆ ಕನ್ನಡ ಭಾವಗೀತೆಯ ಭವ್ಯ ಭವಿಷತ್ತಿನ ಕುರಿತು ಮಾತನಾಡಿದರು. ಕನ್ನಡದ ಕುಲಪುರೋಹಿತ ಆಲೂರ ವೆಂಕಟರಾಯರು, ಜೋಶಿ ನಾರಾಯಣರಾಯರು ಸಮ್ಮೇಳನದಲ್ಲಿ ಪಾಲ್ಗೊಂಡಿದ್ದರು.

ಶ್ರೀ ಆರ್.ಪಿ. ಕುಲಕರ್ಣಿ : (೧.೫.೧೯೦೭- ೨೫.೧.೧೯೯೭)

ಅಥಣಿಯ ಜೆ.ಎ. ಹಾಯಸ್ಕೂಲದಲ್ಲಿ ಮುಖ್ಯಾಧ್ಯಾಪಕರಾಗಿ ಸೇವೆ ಸಲ್ಲಿಸಿದ ಶ್ರೀಯುತರನ್ನು ಜನ ರಾಮಣ್ಣಾ ಮಾಸ್ತರರೆಂದೇ ಗೌರವದಿಂದ ಗುರುತಿಸುತ್ತಿದ್ದರು. ಇವರು ಮರಾಠಿಯ 'ಸಂತಪ್ರಣೀತ ಸಾಕ್ಷಾತ್ಕಾರ ಮಾರ್ಗ' ವನ್ನು ಕನ್ನಡಿಸಿರುವರು. ಉಭಯಭಾಷಾ ಪ್ರವೀಣರಾದ ಇವರು ಮರಾಠಿಯಲ್ಲಿ ಬರೆದ 'ಗುರುದೇವ ದರ್ಶನ' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆತಿದೆ.

ಶ್ರೀ ಮಾಹುಲಿ ಗೋಪಾಳಾಚಾರ್ಯರು : ( ೧೯೦೯)

ಚತುರ್ಭಾಷಾ ವಿದ್ವಾಂಸರಾದ ಇವರು ಐನಾಪುರದಲ್ಲಿ ಜನಿಸಿದರು. ಸಂಸ್ಕೃತ ಕಾವ್ಯ- ವ್ಯಾಕರಣ ಅಭ್ಯಸಿಸಿ ಮುಂಬಯಿ ಮಾತುಂಗಾದಲ್ಲಿ ವಾಣೀ ವಿಹಾರ ವಿದ್ಯಾಲಯ ಸ್ಥಾಪಿಸಿದರು. ಇವರು ಸಂಸ್ಕೃತ, ಹಿಂದಿ, ಇಂಗ್ಲೀಷ ಮತ್ತು ಕನ್ನಡದಲ್ಲಿ ಗ್ರಂಥ ರಚಿಸಿರುವರು. 'ಸಂಧ್ಯಾ ರಹಸ್ಯ' ಇವರ ಶ್ರೇಷ್ಠ ಕೃತಿ.

**ಶ್ರೀ ಲ.ಸಾ.ಹಲ್ಯಾಳ : ( ೧೯೦೯)**

ಲಚ್ಚಪ್ಪ ಮಾಸ್ತರರೆಂದೇ ಪ್ರಸಿದ್ಧರಾಗಿದ್ದರು. ಸಾಹಿತ್ಯ ಸಾಂಸ್ಕೃತಿಕ ಸಂಘದ ಸಂಸ್ಥಾಪಕ ಕಾರ್ಯದರ್ಶಿಯಾಗಿ, ನಂತರ ಅಧ್ಯಕ್ಷರಾಗಿ ಅವರು ಸಲ್ಲಿಸಿದ ಸೇವೆ ಅನುಪಮ. ಕನ್ನಡದ ಅನೇಕ ಹಿರಿಯ ಸಾಹಿತಿಗಳನ್ನು ಸಾಹಿತ್ಯ ಸಾಂಸ್ಕೃತಿಕ ಸಂಘದ ಮೂಲಕ ಅಥಣಿಗೆ ಬರಮಾಡಿಕೊಂಡ ಹಿರಿಮೆಗೆ ಪಾತ್ರರಾಗಿದ್ದಾರೆ.

**ಶ್ರೀ ರಾಜಣ್ಣ ಅನೀಖಂಡಿ : ( ೨.೧೦.೧೯೧೬ - ೧೧.೪.೨೦೦೩)**

ಸಾಹಿತ್ಯ ಸಾಂಸ್ಕೃತಿಕ ಸಂಘದ ಸ್ಥಾಪಕ ಸದಸ್ಯರಾದ ಇವರು ನಂತರ ಸಂಘದ ಹಿತೈಷಿಯಾಗಿ ಸೇವೆಸಲ್ಲಿಸಿದ್ದಾರೆ. ಸಹೃದಯಿ, ವಿನಯಶೀಲರಾದ ಇವರು ಪು.ಲ. ದೇಶಪಾಂಡೆ ಅವರ ಮರಾಠಿ 'ವಿಠಲ ತೋ ಆಲಾ ಆಲಾ' ನಾಟಕವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಅದು ಪು.ಲ. ಅವರ ಅಭಿನಂದನಾ ಗ್ರಂಥದಲ್ಲಿ ಪ್ರಕಟವಾಗಿದೆ.

**ಶ್ರೀ ಅನಂತಚಾರ್ ರಾಮಾಚಾರ್ ಬೀಡಕರ : ( ೧೯೧೬- ೧೭.೧೦.೨೦೦೪)**

ಅಥಣಿ ತಾಲೂಕಿನ ಸತ್ತಿ ಗ್ರಾಮದಲ್ಲಿ ಜನಿಸಿದರು. ವೃತ್ತಿಯಲ್ಲಿ ಶಿಕ್ಷಕರಾದ ಇವರು ಪ್ರವೃತ್ತಿಯಲ್ಲಿ ಸಾಹಿತಿಗಳು. ಬೇಂದ್ರೆಯವರ ನಾಕುತಂತಿಯನ್ನು ರೂಪಕಕ್ಕೆ ಅಳವಡಿಸಿ ವರ ಕವಿಯ ಮನಮೆಚ್ಚಿಸಿದ್ದರು. ಇವರು 'ಬಡವರ ಬಾಸಿಂಗ', 'ಪದ್ಮಶ್ರೀ', ' ಚಂದ್ರಗುಪ್ತ' , 'ಶಸ್ತ್ರ ಸನ್ಯಾಸ', 'ಬೆನ್ನುಮೂಳೆ' ಇತ್ಯಾದಿ ನಾಟಕಗಳನ್ನು ರಚಿಸಿದ್ದರು. ಭಾರತ ದರ್ಶನ, ಹರಿಕಥಾಂಮೃತ ಸಾರ ಸೀಕರ, ಗೋಪಾಲಾಚಾರ್ಯರ ಜೀವನ ಚರಿತ್ರೆ, ಶ್ರೀಕೃಷ್ಣದರ್ಶನ, ಜೀವನ ದರ್ಶನ, ಸಮ್ಯಕ್ ದರ್ಶನ, ಪವನದೂತ ಮೊದಲಾದ ಖಂಡ ಕಾವ್ಯಗಳನ್ನು ಹಾಗೂ ಸಂದಿಪ್ರಕಾಶ, ಅದಲು ಬದಲು ಕಂಚಿ ಕದಲು, ಇದಕಾರು ಹೊಣೆ ಎಂಬ ಕಿರು ಕಾದಂಬರಿಗಳನ್ನು ಬರೆದಿದ್ದಾರೆ.

**ಶ್ರೀ ಬಗಂ ತುರಮರಿ : (೧೦.೦೪.೧೯೧೭)**

ಅಥಣಿಯ ಸಿ.ಎಸ್. ಕಿತ್ತೂರ ಪ್ರೌಢಶಾಲೆಯ ( ಮುಂಚೆಯ ನ್ಯೂ ಹೈಸ್ಕೂಲ) ಮುಖ್ಯಾಧ್ಯಾಪಕರಾಗಿ, ಸೇವೆಸಲ್ಲಿಸುವದರೊಂದಿಗೆ ಈ ಭಾಗದ ಸಾಹಿತ್ಯಿಕ, ಸಾಂಸ್ಕೃತಿಕ ರಾಯಭಾರಿಗಳಾಗಿದ್ದರು. 'ಸಾಹಿತ್ಯ ಮಂಟಪ' ರಚಿಸಿ ಅಥಣಿ ಜನತೆಯ ಸಾಹಿತ್ಯಾಭಿಮಾನವನ್ನು ಬೆಳೆಸಿದವರು. ಸಾಹಿತ್ಯ ಸಾಂಸ್ಕೃತಿಕ ಸಂಘದ ಹಿತೈಸಿಗಳಾಗಿ ಅನೇಕ ಸಾಹಿತಿಗಳನ್ನು ರೂಪಿಸಿದವರು. ೧೯೭೬ರಲ್ಲಿ ' ಸಿರಿನುಡಿ ' ಪ್ರಕಾಶನ ಸ್ಥಾಪಿಸಿ ಸುಮಾರು ೨೫ ಉದಯೋನ್ಮುಖ ಸಾಹಿತಿಗಳ ಗ್ರಂಥಗಳನ್ನು ಪ್ರಕಟಿಸಿ ಯುವ ಪ್ರತಿಭೆಗಳನ್ನು ಬೆಳಕಿಗೆ ತಂದರು.

ಇವರ ಕ್ರಿಯಾಶೀಲತೆಯನ್ನು ಕಂಡು ಡಾ॥ ಅಡಿಗರು ನೀವು ಬಿ. ಜಿ (ಆ್ಯಥಾ) ತುರಮರಿ ಎಂದು ಹಾಸ್ಯ ಮಾಡುತ್ತಿದ್ದರು. ಇವರ ಸೇವೆಯನ್ನು ಮನಗಂಡು ಅಥಣಿಯ ಅಭಿಮಾನಿಗಳು ೧೯೯೮ ರಲ್ಲಿ ಸನ್ಮಾನ ಸಮಾರಂಭ ಏರ್ಪಡಿಸಿದ್ದರು. ನಾಡೋಜರಾದ ಡಾ. ಪಾಟೀಲ ಪುಟ್ಟಪ್ಪ, ಚೆನ್ನವೀರ ಕಣವಿ ಮತ್ತು ಶ್ರೀ

ಬಿ.ಎ. ಸನದಿ, ಪ್ರೊ.ಪಿ.ಕೆ. ಭಾಗೋಜಿ ಇವರ ಸಮ್ಮುಖದಲ್ಲಿ ಅವರಿಗೆ 'ಶ್ರೀ ಬ. ಗಂ. ತು -೮೧' ಅಭಿನಂದನ ಗ್ರಂಥ ಸಮರ್ಪಿಸಿ ಸನ್ಮಾನಿಸಿ ಗೌರವಿಸಲಾಯಿತು. ಆದರ್ಶ ಶಿಕ್ಷಕರು, ಅಪೂರ್ವ ಕನ್ನಡ ಪ್ರೇಮಿಗಳು, ಸಾಹಿತ್ಯ ಪ್ರೇಮಿಗಳು, ವೈಜ್ಞಾನಿಕ ಮನೋಭಾವದವರಾಗಿರುವ ಬ.ಗಂ. ತು ನೂರು ವಸಂತಗಳನ್ನು ಕಾಣಲಿ ಎಂದು ಹಾರೈಸುವೆ.

ಶ್ರೀ ಕೆ.ಬಿ. ಫಡಕೆ : (೧೭.೦೨.೧೯೧೮ )

ಉತ್ತಮ ಶಿಕ್ಷಕರಾಗಿ ಸೇವೆ ಸಲ್ಲಿಸಿದ್ದಾರೆ. ಇವರ ಕೃತಿಗಳು ವಿಚಾರ ಶೀಲ, ಅಧ್ಯಯನಶೀಲ ಹಾಗೂ ಆಚರಣೆಗೆ ಹತ್ತಿರ ' ವಿಚಾರ ಕರಾಲ?' ಎಂಬ ಮರಾಠಿ ಹಾಗೂ 'ಬದುಕುವದಕ್ಕೆ ಇದೊಂದೇ ಮಾರ್ಗ' ಎಂಬ ಕನ್ನಡ ಕೃತಿಗಳು ಅವರ ವ್ಯಕ್ತಿತ್ವವನ್ನು ಎತ್ತಿ ತೋರುತ್ತವೆ.

ಶ್ರೀ ಮಿರ್ಜಿ ಅಣ್ಣಾರಾಯರು : ( ೨೫.೮.೧೯೧೮ -೨೩.೧೨.೧೯೭೫ )

ಖ್ಯಾತ ಸಾಹಿತಿ, ರಾಷ್ಟ್ರ ಪ್ರಶಸ್ತಿ ವಿಜೇತ ಆದರ್ಶ ಶಿಕ್ಷಕರು. ಗಡಿಭಾಗದ ಶೇಡಬಾಳದವರಾದ ಇವರು ನವೋದಯ ಸಾಹಿತ್ಯದ ಗಣ್ಯ ಲೇಖಕರು. ಅಣ್ಣಾರಾಯರು ವಿದ್ಯಾರ್ಥಿಯಾಗಿ ಕಾಲೇಜ ಕಟ್ಟೆ ಹತ್ತಿದವರಲ್ಲ. ಆದರೆ ಅವರು ಬರೆದ ಕೃತಿಗಳು ಸ್ನಾತಕೋತ್ತರ ಪದವಿಗೆ ಪಠ್ಯವಾಗಿವೆ. ಇವರ ಸಾಹಿತ್ಯ ಕುರಿತು ಡಾ. ಶಿವಾನಂದ ಗಾಳಿ ಸಂಶೋಧನಾ ಪ್ರಬಂಧ ಮಂಡಿಸಿ ಪಿಎಚ್.ಡಿ. ಪದವಿ ಪಡೆದಿದ್ದಾರೆ.

'ನಿಸರ್ಗ' ಇವರ ಶ್ರೇಷ್ಠ ಪ್ರಾದೇಶಿಕ ಕಾದಂಬರಿ. ರಾಷ್ಟ್ರ ಪುರುಷ, ಪ್ರತಿಸರಕಾರ, ರಾಮಣ್ಣ ಮಾಸ್ತರು, ಅಶೋಕ ಚಕ್ರ, ಶ್ರೇಯಾಂಸ - ಐ, ಐಐ, ಎರಡು ಹೆಜ್ಜೆ, ಹದಗೆಟ್ಟ ಹಳ್ಳಿ, ಭಸ್ಮಾಸುರ ಮುಂತಾದವು ಅಣ್ಣಾರಾಯರ ಸಾಮಾಜಿಕ ಕಾದಂಬರಿಗಳು. ಸಾಮ್ರಾಟ ಶ್ರೇಣಿಕ, ಚಾವುಂಡರಾಯ, ಸಿದ್ಧಚಕ್ರ ಚಾರಿತ್ರಿಕ ಕಾದಂಬರಿಗಳು. ಪ್ರಣಯ ಸಮಾಧಿ, ಅಮರ ಕತೆಗಳು, ವಿಜಯಶ್ರೀ ಇವು ಕಥಾ ಸಂಕಲನಗಳು. ಮೂಲ ಶಿಕ್ಷಣ ಮೌಲ್ಯಮಾಪನ, ಭಾಷಾ ಶಿಕ್ಷಣ, ಲೇಖನ ಕಲೆ ಇವು ಶೈಕ್ಷಣಿಕ ಗ್ರಂಥಗಳು. ಕಲ್ಯಾಣ ಕೀರ್ತಿಕವಿಯ ಚಿನ್ಮಯ ಚಿಂತಾಮಣಿ, ಭರತೇಶ ವೈಭವದ ಶೋಭನ ಸಂದಿಗಳು ಇವು ಸಂಪಾದಿಸಿದ ಗ್ರಂಥಗಳು. ದತ್ತವಾಣಿ, ವಿಮರ್ಶೆಯ ಸ್ವರೂಪ, ಭರತೇಶನ ನಾಲ್ಕು ಚಿತ್ರಗಳು, ಕನ್ನಡ ಸಾಹಿತ್ಯದ ಒಲವುಗಳು ಇವು ವಿಮರ್ಶೆಯ ಕೃತಿಗಳು. ಇದು ಅಲ್ಲದೆ ಐದು ಮಕ್ಕಳ ಕೃತಿಗಳು, ನಾಲ್ಕು ಧಾರ್ಮಿಕ ಪ್ರೌಢ ಪ್ರಬಂಧಗಳು, ಮಹಾಪುರುಷರ ಜೀವನ ಚರಿತ್ರೆಗಳು, ಒಂದು ಪ್ರವಾಸ ಕಥನ ಹಾಗೂ ೧೩೮ ಕ್ಕಿಂತ ಹೆಚ್ಚು ಲೇಖನಗಳು ಪ್ರಕಟಗೊಂಡಿವೆ.

ಅಣ್ಣಾರಾಯರ ಪ್ರೌಢ ಗ್ರಂಥವೆಂದರೆ 'ಜೈನ ಧರ್ಮ'. ಜೈನ ಧರ್ಮದ ಅಭ್ಯಾಸಿಗಳಿಗೆ ಇದೊಂದು ಕಲ್ಪವೃಕ್ಷ. ಮಹಾಪುರಾಣಸಾರ, ಭಾರತೀಯ ಸಂಸ್ಕೃತಿಗೆ ಜೈನ ಧರ್ಮದ ಕೊಡುಗೆ, ರವಿಶೇಣ ರಾಮಾಯಣ, ರತ್ನಕರಂಡಕ ಶ್ರಾವಕಾಚಾರ ಇವುಗಳನ್ನು ಕನ್ನಡದಲ್ಲಿ ಸಾದರಪಡಿಸಿದ್ದಾರೆ. ಶೇಡಬಾಳದಲ್ಲಿ 'ಶಾಂತಿಸೇವಾ ಸದನ' ಪ್ರಕಾಶನ ಸಂಸ್ಥೆ ಸ್ಥಾಪಿಸಿ ಅನೇಕ ಉದಯೋನ್ಮುಖರಿಗೆ ಪ್ರೋತ್ಸಾಹ ನೀಡಿದ್ದಾರೆ.

೫೭ ವರ್ಷ ಬದುಕಿ ಅಷ್ಟೇ ಸಂಖ್ಯೆಯ ಗ್ರಂಥಗಳನ್ನು ಕನ್ನಡ ಸಾರಸ್ವತ ಲೋಕಕ್ಕೆ ನೀಡಿದ್ದಾರೆ.

ಕನ್ನಡ ಸಾಹಿತ್ಯ ಪರಿಷತ್ ಜಿಲ್ಲಾ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ೧೯೭೩ರಲ್ಲಿ ಬೆಳಗಾಂವಿ ಜಿಲ್ಲಾ ಸಮ್ಮೇಳನವನ್ನು ಯಶಸ್ವಿಯಾಗಿ ಏರ್ಪಡಿಸಿದ್ದರು. ಮುಂಬಯಿ ಸರಕಾರ, ಸಾಹಿತ್ಯ ಪರಿಷತ್, ವಿದ್ಯಾವರ್ಧಕ ಸಂಘ, ಅಕಾಡೆಮಿ ಮುಂತಾದ ಪ್ರಶಸ್ತಿಗೆ ಭಾಜನರಾಗಿದ್ದಾರೆ.

ಶ್ರೀ ಮೋಟಗಿ ಮಲ್ಲಿಕಾರ್ಜುನ : (೨.೨.೧೯೧೯ - ೧೨.೬.೧೯೯೯)

'ಕನ್ನಡ ಕವಿ ಕಾಳಿದಾಸ'ಕಾವ್ಯನಾಮದಿಂದ ಗ್ರಂಥಗಳನ್ನು ರಚಿಸಿದ್ದಾರೆ. ವೃತ್ತಿಯಿಂದ ವ್ಯಾಪಾರಿಗಳಾದ ಇವರು ಪ್ರವೃತ್ತಿಯಿಂದ ಕವಿ, ಸಾಹಿತಿಗಳು. ಲಿಂಗ ವಿಲಾಸ, ಅಂತಃಪುರಗೀತೆ, ಆತ್ಮಸ್ವಾತಂತ್ರ್ಯ, ಧರ್ಮರಹಸ್ಯ ಹಾಗೂ ಶಿವಾನುಭವ ದರ್ಪಣ ಎಂಬ ಐದು ಚಂಪೂ ಕಾವ್ಯಗಳನ್ನು ರಚಿಸಿದ್ದಾರೆ.ದಿವ್ಯವಾಣಿ (ವಚನ ಸಂಕಲನ), ಧರ್ಮಜ್ಞನ ತ್ರಿಪದಿಗಳು, ದೇವದೂತ, ದೇವಪುರುಷರ ಚರಿತಾಮೃತ (ತ್ರಿಪದಿಕಾವ್ಯ) ಮುಂತಾದ ಗ್ರಂಥಗಳನ್ನು ರಚಿಸಿದ ಖ್ಯಾತ ಸಾಹಿತಿಗಳು.

ಡಾ. ಜ.ಚ.ನಿ. ಅವರು ತಮ್ಮ ಪ್ರಕಾಶನದ ಅಡಿಯಲ್ಲಿ ಶ್ರೀ ಮೋಟಗಿ ಅವರ 'ಮಹಾದೇವಿ' ಎಂಬ ಕೃತಿಯನ್ನು ಹೊರತಂದಿದ್ದಾರೆ. ಮೋಟಗಿ ಮಠದ ಶ್ರೀ ಪ್ರಭು ಚನ್ನಬಸವ ಸ್ವಾಮೀಜಿ ಅವರು 'ಕವಿರತ್ನ' ಪ್ರಶಸ್ತಿ ನೀಡಿ ಸನ್ಮಾನಿಸಿದ್ದಾರೆ. ಶ್ರೀ ಶಿವಯೋಗೀಶ್ವರ ಗ್ರಂಥ ಮಾಲೆಯ ಮೂಲಕ ಸುಮಾರು ಹದಿನೈದು ಗ್ರಂಥಗಳನ್ನು ರಚಿಸಿ, ಪ್ರಕಟಿಸಿ ಕನ್ನಡ ಸಾರಸ್ವತ ಲೋಕದಲ್ಲಿ ಮಿಂಚಿದ್ದಾರೆ. ಶ್ರೀ ಮೋಟಗಿ ಅವರು ಶರಣ ಸಾಹಿತ್ಯದ ಬಗ್ಗೆ ಅಪಾರ ಒಲವುಳ್ಳ ಆಧ್ಯಾತ್ಮ ಜೀವಿಗಳು.

ಶ್ರೀ ಎಂ. ವಿ. ಪಾಟೀಲ : (೬.೧.೧೯೨೭ - ೪.೨.೧೯೯೭ )

ವೃತ್ತಿಯಿಂದ ವಕೀಲರಾದರೂ ಪ್ರವೃತ್ತಿಯಿಂದ ಸಾಹಿತ್ಯಾಸಕ್ತರು, ವಿಚಾರಶೀಲ ಚಿಂತಕರು. ಮರಾಠಿ ಹಿರಿಯ ಸಾಹಿತಿಗಳಾದ ಸಹಸ್ರಬುದ್ಧೆ ಅವರ ಶ್ರೇಷ್ಠ ಚಿಂತನಶೀಲ ಕೃತಿ "ಪರಾದೀನ ಸರಸ್ವತಿ"ಯನ್ನು ಕನ್ನಡಕ್ಕೆ ಅನುವಾದಿಸಿ ಉಪಕರಿಸಿದ್ದಾರೆ. ಸಾಹಿತ್ಯ ಸಾಂಸ್ಕೃತಿಕ ಸಂಘದ ಅಧ್ಯಕ್ಷರಾಗಿ, ಹಿತೈಷಿಯಾಗಿ ಸಲ್ಲಿಸಿದ ಸೇವೆ ಅಪ್ರತಿಮ.

ಶ್ರೀ ದು.ನಿಂ. ಬೆಳಗಲಿ :

ರಾಷ್ಟ್ರ ಪ್ರಶಸ್ತಿ ವಿಜೇತ ಆದರ್ಶ ಶಿಕ್ಷಕರು, ಕನ್ನಡದ ಖ್ಯಾತ ಕಾದಂಬರಿಕಾರರು. ಸರಳ ಸಜ್ಜನಿಕೆಯ ಮೇರು ವ್ಯಕ್ತಿತ್ವ, ೧೦ ಕಥಾ ಸಂಕಲನಗಳು, ೧೫ ಕಾದಂಬರಿಗಳು, ೫ ಅನುವಾದ ಕೃತಿಗಳು, ೮ ಮಕ್ಕಳ ಸಾಹಿತ್ಯ ಕೃತಿಗಳು, ೩ ಆತ್ಮ ಕಥೆಗಳು, ೨ ಸಂಶೋಧನಾ ಪ್ರಬಂಧಗಳು ಇವರಿಂದ ಪ್ರಕಟವಾಗಿವೆ. ಇನ್ನೂ ಪ್ರಕಟವಾಗದ ಅಪಾರ ಸಂಖ್ಯೆಯ ಕಥೆಗಳು, ೨ ಪ್ರವಾಸ ಕಥನಗಳು, ಹಲವಾರು ಬಿಡಿ ಲೇಖನಗಳನ್ನು ರಚಿಸಿ, ಕನ್ನಡದ ಶ್ರೇಷ್ಠ ಕತೆಗಾರ, ಪ್ರಾದೇಶಿಕ ಕಾದಂಬರಿಕಾರರಾಗಿ ಖ್ಯಾತರಾಗಿದ್ದಾರೆ. ಇವರಿಗೆ ರಾಜ್ಯೋತ್ಸವ, ಅಕಾಡೆಮಿ ಚುಕ್ಕಿ ಪ್ರತಿಷ್ಠಾನ ಮುಂತಾದ ಪ್ರಶಸ್ತಿಗಳನ್ನು ತಮ್ಮದಾಗಿಸಿಕೊಂಡಿದ್ದಾರೆ. ಬನಹಟ್ಟಿಯಲ್ಲಿ ನೆಲೆನಿಂತಿದ್ದರೂ ಅಥಣಿ ಪರಿಸರವೇ ಅವರ ಸಾಹಿತ್ಯಿಕ ಮೂಲ ಸೆಲೆಯಾಗಿದೆ.

ಡಾ॥ ವಸಂತ ಕುಲಕರ್ಣಿ : (೧.೬.೧೯೪೩)

ವಿಜಾಪೂರದ ಪ್ರತಿಷ್ಠಿತ ಶ್ರೀ ಬಿ. ಎಂ. ಪಾಟೀಲ ವೈದ್ಯಕೀಯ ಮಹಾವಿದ್ಯಾಲಯದಲ್ಲಿ ಶರೀರ ಶಾಸ್ತ್ರ ವಿಭಾಗದ ಮುಖ್ಯಸ್ಥರಾಗಿ ಸೇವೆಸಲ್ಲಿಸುತ್ತಿದ್ದಾರೆ. ಪೂಜ್ಯ ಸಿದ್ಧೇಶ್ವರ ಸ್ವಾಮೀಜಿ ಅವರು ತಮ್ಮ ಆಶೀರ್ವಚನದಲ್ಲಿ ಹೇಳಿರುವಂತೆ ಡಾ. ವಸಂತ ಕುಲಕರ್ಣಿ ಅವರು ವೃತ್ತಿಯಿಂದ ವೈದ್ಯಕೀಯ ಪ್ರಾಧ್ಯಾಪಕರು, ಭಾವದಲ್ಲಿ ಕವಿಗಳು, ಒಲವಿನಲ್ಲಿ ಶೋಧಕರು. ಅವರಿಗೆ ಪ್ರೀಯಾತಿ ಪ್ರೀಯವಾದುದು ಕನ್ನಡಿ, ಆ ಕಂ-ನುಡಿಯೊಳಗಣ ಸಂ-ಸ್ಕೃತಿ!. ಕುತೂಹಲ ಹಾಗೂ ಪರಿವೀಕ್ಷಣೆಗಳು ಅವರ ಅನುಭಾವ ಸಂಪತ್ತಿನ ಮೂಲಗಳು. ಅವರಿಂದ ರಚಿತವಾದ ಕೃತಿಗಳಲ್ಲೆಲ್ಲ ಅವು ಅಭಿವ್ಯಕ್ತವಾಗಿವೆ ಎಂದಿದ್ದಾರೆ.

ದೇಹವೆಂಬ ವಿಶ್ವ ಚಿರಂಜಿವಿ ಈ ನರತಂತು, ಹೃದಯ ರೇಖೇಗಳು, ದೇಹಕ್ಕೊಂದು ಪ್ರದಕ್ಷಿಣೆ, ದೇಹವೀಣೆಯ ಸಪ್ತಸ್ವರ ಇವರ ಪ್ರಕಟಗೊಂಡ ಕವನ ಸಂಕಲನಗಳಾಗಿವೆ. ಸಮರ್ಪಣೆ - (ವ್ಯಕ್ತಿ ಚಿತ್ರಗಳು), ದೇಹಕ್ರಿಯೆಯ ಸೋಜಿಗಗಳು, ಡಾಕು-ವಿನ ಹರಟೆಗಳು, ದೇಹದಲ್ಲಿ ಏಳು ದಿನಗಳ ಪಯಣ (ಕುವೆಂಪು ವೈದ್ಯ ಸಾಹಿತ್ಯ ಪ್ರಶಸ್ತಿ ಪುರಸ್ಕೃತ ), ಕಾವ್ಯಸ್ಪಂದನ-ಹನಿ ಹನಿ ಸ್ಪಂದನ, ದೇಹ ಲೋಕದ ವಿಸ್ಮಯಗಳು (ಲೇಖನ ಮಾಲೆ ಸಂಕಲನ), ದೇಹದೇಗುಲಕ್ಕೊಂದು ಪ್ರಣಾಮ (ವೈದ್ಯ ಲಲಿತ ಪ್ರಬಂಧಗಳು ) ಇವು ಗದ್ಯ ಕೃತಿಗಳಾಗಿವೆ.

ತಪೋನಿಧಿ (ಸಂಸ್ಮರಣ ಸಂಪುಟ), ಸಂಕಲ್ಪ -ವೈದ್ಯ ವಿದ್ಯಾಲಯ ಸಂಪುಟ, 'ಭಾವತರ್ಪಣ' (ಗುರುವರ್ಯ ದಿ. ಡಾ|| ಆರ್. ಎಚ್. ಕುಲಕರ್ಣಿ ನೆನಪುಗಳ ಸಂಕಲನ), 'ನವೋದಿನಿ' ಅಭಿನಂದನ ಗ್ರಂಥ- (ದಿ. ವಾಸಂತಿಬಾಯಿ ಜಿಗಜಿನ್ನಿ ಅವರನ್ನು ಕುರಿತು), ವೈದ್ಯ ವಿಶ್ವಕೋಶ - ( ಸಹ ಸಂಪಾದಕ ಹಂಪಿ ಕನ್ನಡ ವಿಶ್ವವಿದ್ಯಾಲಯ) ಇವು ಸಂಪಾದಿತ ಕೃತಿಗಳಾಗಿವೆ.

ಶಬ್ದ ಗಾರುಡಿಗೆ ಬೇಂದ್ರೆ ಅವರ ಪ್ರಭಾವದಲ್ಲಿ ಅರಳಿದ ಇವರು ಕನ್ನಡ ವೈದ್ಯ ಸಾಹಿತ್ಯ ಪರಿಷತ್ತು ಬೆಂಗಳೂರು, ಇದರ ರಾಜ್ಯಾಧ್ಯಕ್ಷರಾಗಿದ್ದರು. ಮೂಲತಃ ಅಥಣಿಯವರಾದ ಡಾ. ವಸಂತ ಕುಲಕರ್ಣಿಯವರು ಅಥಣಿಯ ಸಾಹಿತ್ಯ ಸಾಂಸ್ಕೃತಿಕ ಸಂಘದ ಕ್ರಿಯಾಶೀಲ ಅಧ್ಯಕ್ಷರಾಗಿದ್ದರು. ಈಗ ವಿಜಾಪುರದ ಸಾಹಿತ್ಯ ಸಂಜೀವಿಯಾಗಿದ್ದಾರೆ. ವೈದ್ಯ ಸಾಹಿತ್ಯ ಪ್ರಶಸ್ತಿ ಹಾಗೂ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರಾಗಿದ್ದಾರೆ.

ಶ್ರೀ ಶಿವಪುತ್ರ ಯಾದವಾಡ : (೧೧.೦೨.೧೯೪೪)

ಸ್ಟೇಟ ಬ್ಯಾಂಕ ಆಫ್ ಇಂಡಿಯಾ, ಬ್ರಾಂಚ ಅಥಣಿಯಲ್ಲಿ ಸೇವೆ ಸಲ್ಲಿಸಿ ಸ್ವಯಂ ನಿವೃತ್ತಿ ಪಡೆದಿದ್ದಾರೆ. ಸಾಮಾಜಿಕ ಕೆಲಸದಲ್ಲಿ ಆಸಕ್ತಿಯುಳ್ಳ ಇವರು ಹಿರಿಯ ವರದಿಗಾರರು. ಭಜನಾ ಪದ್ಯಾವಳಿ, ದಿವ್ಯ ಭಿಕ್ಷೆ ಕೃತಿಗಳನ್ನು ಪ್ರಕಟಿಸಿದ್ದಾರೆ. ಅಥಣಿ ಪರಿಸರದ ಕವನ ಸಂಕಲನವನ್ನು ಸಂಪಾದಿಸಿ ೧೯೭೨ ರಲ್ಲಿ ಪ್ರಕಟಿಸಿದ್ದಾರೆ. ತಾಲೂಕ ಲೇಖಕರ ಪರಿಚಯ ಪುಸ್ತಕ ಪ್ರಕಟಿಸಿದ್ದಾರೆ. 'ತಪೋನಿಧಿ' ಸ್ಮರಣ ಸಂಚಿಕೆ, 'ವಿಮೋಚನಾ' ವಾರ್ಷಿಕ ಸಂಚಿಕೆ 'ಶ್ರೀ ಮಥಥಣಿ ಮುರುಘೇಂದ್ರ ಶಿವಯೋಗಿಗಳ ಚರಿತ್ರೆ ' ಇವು ಸಂಪಾದಿತ ಕೃತಿಗಳು.

ಹವ್ಯಾಸಿ ರಂಗ ಕಲಾವಿಧರಾದ ಯಾದವಾಡರವರು ಅನೇಕ ಸಂಘ, ಸಂಸ್ಥೆಗಳ ಒಡನಾಟವನ್ನು ಹೊಂದಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. 'ಶರಣ ಸಾಹಿತ್ಯ ರತ್ನ '

ಮುಂತಾದ ಪ್ರಶಸ್ತಿ ಪಡೆದು ಸನ್ಮಾನಿತರಾಗಿದ್ದಾರೆ.

**ಪ್ರೊ. ಸಿದ್ದಣ್ಣ ಉತ್ನಾಳ : (೮.೦೯.೧೯೪೪)**

ಅವರು ಅಥಣಿಯ ಶ್ರೀ ಶಿವಯೋಗಿ ಮುರುಘೇಂದ್ರ ಸ್ವಾಮೀಜಿ ಮಹಾವಿದ್ಯಾಲದಲ್ಲಿ ಕನ್ನಡ ಉಪನ್ಯಾಸಕರಾಗಿ ನಿಯುಕ್ತರಾಗಿ ಅಲ್ಲಿಯೇ ನಿವೃತ್ತರಾಗಿ ಅಥಣಿಯಲ್ಲಿಯೇ ನೆಲೆಸಿದವರು. ಕನ್ನಡ ಸಾಹಿತ್ಯ ಅಕಾಡೆಮಿ ಹಾಗೂ ಕನ್ನಡ ಪುಸ್ತಕ ಪ್ರಾಧಿಕಾರದ ಸದಸ್ಯರಾಗಿ ಶ್ರಮಿಸಿದವರು. ದಾಸ ಸಾಹಿತ್ಯ ಹಾಗೂ ಮಿರ್ಜಿ ಅಣ್ಣಾರಾಯರ ಬದುಕು-ಬರಹದ ಮೇಲೆ ರಾಜ್ಯ ಮಟ್ಟದ ವಿಚಾರ ಸಂಕಿರಣ ಏರ್ಪಡಿಸಿದ ಚತುರ ಸಂಘಟಕರು, ಮಧುರ ಮಾತುಗಾರರು.

ಅನುಪಮ ಪ್ರಕಾಶನ ಸ್ಥಾಪಿಸಿ ಅದರ ಮೂಲಕ ಮೂವತ್ತು ಕೃತಿಗಳನ್ನು ಪ್ರಕಟಿಸಿ ರಾಷ್ಟ್ರಮಟ್ಟದ ಪ್ರಶಸ್ತಿ ಪಡೆದ ಪ್ರಮುಖ ಪ್ರಕಾಶಕರು. ಶರಣ ಸೌರಭ, ಪ್ರಾದೇಶಿಕ ಕಾದಂಬರಿಗಳು, ಅಥಣಿ ಶಿವಯೋಗಿಗಳು ಮೊದಲಾದ ಎಂಟು ಕೃತಿಗಳನ್ನು ರಚಿಸಿದ ಖ್ಯಾತ ಸಾಹಿತಿಗಳು. ಅನೇಕ ಪ್ರಶಸ್ತಿ,ಸನ್ಮಾನಗಳನ್ನು ಪಡೆದ ಇವರು ಇತ್ತೀಚೆಗೆ ಗ್ಲೋಬಲ್ ಅವಾರ್ಡ್ ಪಡೆದು ಅಭಿನಂದನೆಗೆ ಪಾತ್ರರಾಗಿದ್ದಾರೆ.

**ಶ್ರೀ ವಿವೇಕಾನಂದ ಎಸ್. ಮನವಾಡೆ : (೦೧.೦೬.೧೯೪೭)**

ವಿಮೋಚನಾ ಪ್ರಕಾಶನದ ನಿರ್ದೇಶಕರಾಗಿರುವ ಇವರು ತಮ್ಮ ಶಕ್ತಿ ಸಾಮರ್ಥ್ಯ, ಪ್ರತಿಭೆಯನ್ನು ಇದಕ್ಕಾಗಿ ಮುಡಿಪಾಗಿಟ್ಟದ್ದಾರೆ. 'ಸುಪ್ತ ಚೇತನ' ಕವನ ಸಂಕಲನ ಪ್ರಕಟಿಸಿದ್ದಾರೆ. 'ಪ್ರಾಯೋಜನೆ ಮತ್ತು ಅವಿರತ ಅಭಿವೃದ್ಧಿಯೆಡೆಗೆ' ಎನ್ನುವ ಗ್ರಂಥವನ್ನು ಸುಭಾಸ ಚಿಟಗುಪ್ಪಕರ ಜೊತೆಯಾಗಿ ಬರೆದು ಪ್ರಕಟಿಸಿದ್ದಾರೆ. ಎನ್.ಜಿ.ಓ. ನಡೆಸುವವರಿಗೆ ಮಾರ್ಗದರ್ಶಿ ಕೃತಿಯಾಗಿದ್ದು ವಿಮೋಚನಾ ಪ್ರಕಾಶನದ ೪೯ ನೇ ಪ್ರಕಟನೆಯಾಗಿದೆ. 'ಖಟ್ಟಜ್ಜ್ಞ ಉಟ್ಟ್ಲಟಇಜ್ಜ್ಞ ಠಿಥಿಥ ಟ್ಲಗಟಇಟ್ಟ್ಲಟ್ಟುಠಿಜಠಿಠಿಜಟ್ಲಟ್ಟ ಆಜ್ಞಜಚ್ಜ್ಟಟ್ಟಥಿ ಜಠಿಥ' ಎಂಬ ಸಂಶೋಧನಾತ್ಮಕ ಲೇಖನವನ್ನು ಬರೆದಿದ್ದಾರೆ. ಇವರು ಅನೇಕ ಲೇಖನಗಳು ಕವನಗಳು ಪ್ರಕಟಗೊಂಡಿವೆ.

**ಶ್ರೀನಾರಾಯಣ ಅನೀಖಂಡಿ ( ೧೪.೦೭.೧೯೫೦)**

ತಂದೆಯಿಂದ ಸಾಹಿತ್ಯಾಭಿರುಚಿಯನ್ನು ಬಳುವಳಿಯಾಗಿ ಪಡೆದ ಇವರು ಬರೆದ ಅನೇಕ ಬಿಡಿಕವನ, ಲೇಖನಗಳು ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ.ಹವ್ಯಾಸಿ ರಂಗ ಕಲಾವಿದರಾದ ಇವರು ಸಾಹಿತ್ಯ ಸಾಂಸ್ಕೃತಿಕ ಸಂಘದ ಕಾರ್ಯದರ್ಶಿಯಾಗಿ, ಅಧ್ಯಕ್ಷರಾಗಿ, ಹಿತೈಷಿಯಾಗಿ ಅಪ್ರತಿಮ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

**ಶ್ರೀ ಕೆ.ಎಲ್. ಕುಂದರಗಿ : (೧೦.೧೦.೧೯೫೧)**

ವಕೀಲಿ ವೃತ್ತಿಯಲ್ಲಿದ್ದರೂ ಸೃಜನಶೀಲತೆಯನ್ನು ಜೀವಂತವಾಗಿರಿಸಿಕೊಂಡ ಪ್ರತಿಭಾವಂತ ಕಥೆಗಾರರು, ನಾಟಕಕಾರರು ಹಾಗೂ ರಂಗ ಕಲಾವಿದರು. ಗಾಂಧಿ ಮರಳಿ ಬಂದಾಗ, ಸ್ವಾಮೀಜಿ, ಬಿಡುಗಡೆ, ಇವು ಅವರ ಪ್ರಕಟಿತ ಪ್ರಸಿದ್ಧ ನಾಟಕಗಳು. ಕಣ್ಣೀರಿನ ಹೂವು, ನಕ್ಕುಬಿಡಿ ಸಾಕು, ಸೂರ್ಯ ಚಂದ್ರರ ನಡುವೆ, ತೋಳ ಬಂತಲೆ ತೋಳ, ಮಹಾಭಾರತ ಇವು ಅಪ್ರಕಟಿತ ನಾಟಕಗಳು. ಸಾಹಿತ್ಯ ಸಾಂಸ್ಕೃತಿಕ

ಸಂಘದ ಹಿಂದಿನ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ.

**ಪ್ರೊ. ಈರಣ್ಣ ಮಠಪತಿ : (೦೧-೦೬-೧೯೫೦)**

ಹಾರೂಗೇರಿಯ ಶರಣ ವಿಚಾರ ವಾಹಿನಿಯ ಸಂಚಾಲಕರಾದ ಇವರು ಸತ್ತಿ ಗ್ರಾಮದವರು. 'ಸ್ನೇಹ ಕುಂಜ ವಿಚಾರ ವೇದಿಕೆ' ಸ್ಥಾಪಿಸಿ ಡಾ. ಕುವೆಂಪು ಕೃತಿ ಸಮೀಕ್ಷೆ, ಮುತ್ತು ಸುರಿದಾವ(ಜಾನಪದ), ಬೆಳಕು ಹರಿದಿತ್ತು(ಕಥಾ ಸಂಕಲನ), ತಪ್ಪೆಜ್ಜೆಗಳು, ಹಲವು ಹೂವು ಹಲವು ಗಂಧ ( ಕವನ ಸಂಕಲನ) ಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ, ಹಲವು ಬರಹಗಾರರನ್ನು ಬೆಳಕಿಗೆ ತಂದಿದ್ದಾರೆ.

' ಶರಣ ವಿಚಾರ ವಾಹಿನಿ ' ಇದು ಸಮಾಜೋಧಾರ್ಮಿಕ ಸಂಸ್ಥೆ, ಸಾವಿರಾರು ಕಾರ್ಯಕ್ರಮಗಳನ್ನು ಸಂಘಟಿಸಿದ ಕೀರ್ತಿಗೆ ಪಾತ್ರರಾಗಿದ್ದಾರೆ. ಶರಣ ಬದುಕು ಬದುಕಿದವರ ಗ್ರಂಥ ಮಾಲೆಯಡಿ ಹತ್ತು ಶರಣರನ್ನು ಪರಿಚಯಿಸಿದ್ದಾರೆ. ಸೇವೆ- ಸ್ಮರಣೆ, ಬೆಳಗಾವಿ ಬಳುವಳಿ, ಬೆಳ್ಳಿ-ಬೆಳಕು ಇವು ಇವರ ಇತರ ಸಂಪಾದನೆಗಳು. ಸ್ನೇಹ ಜೀವಿ ಶರಣ ಜೀವಿಯಾದ ಮಠಪತಿಯವರು ಒಳ್ಳೇಯ ಸಂಘಟಕರು, ಪ್ರವಚನಕಾರರು ಆಗಿದ್ದಾರೆ.

**ಶ್ರೀ ಸಿದ್ಧರಾಜ ಪೂಜಾರಿ : (೦೨-೧೦-೧೯೫೩)**

ಇವರು ಆಂಗ್ಲ ಭಾಷೆಯಲ್ಲಿ ಎಂ. ಎ. ಪದವೀಧರರು, ಅಧ್ಯಾಪನ ವೃತ್ತಿ ತೊರೆದು ತಮ್ಮ ಬದುಕನ್ನೇ ಸಾಹಿತ್ಯ ಸೃಷ್ಟಿಗೆ ಮುಡಿಪಾಗಿರಿಸಿದ್ದಾರೆ. ಖ್ಯಾತ ವಿಮರ್ಶಕ, ಕವಿ, ಅನುವಾದಕರಾದ ಇವರು ಕೊಕಟನೂರಿನವರು. ಸಾಹಿತ್ಯ ಸಂಗೀತ ಹಾಗೂ ಪತ್ರಿಕೋದ್ಯಮದಲ್ಲಿ ಅಪಾರ ಆಸಕ್ತಿ ಅನುಭವ ಪಡೆದಿದ್ದಾರೆ. 'ಗೀತ ಗಾಂಧಾರ', 'ನನ್ನಿಂದಾಚೆಯ ಬದುಕು' ಕವನ ಸಂಕಲನಗಳು ಅವರ ಕಾವ್ಯ ಪ್ರೌಢಿಮೆಯನ್ನು ಶ್ರುತಪಡಿಸಿವೆ. 'ಮೌನ ಲೋಕದ ಹಾಡುಗಳು' ಇವರಿಗೆ ಕೀರ್ತಿ, ಗೌರವವನ್ನು ತಂದು ಕೊಟ್ಟ ಸಿದ್ಧೇಶ್ವರ ಶ್ರೀಗಳವರ ಆಂಗ್ಲ ಕವನ ಸಂಕಲನ " Songs of Silence" ಕೃತಿಯ ಕನ್ನಡಾನುವಾದ. ಅರ್ನೆಸ್ಟ್ ಹೆಮಿಂಗ್ವೇ ಅವರ ನೊಬೆಲ್ ಪ್ರಶಸ್ತಿ ವಿಜೇತ ಆಂಗ್ಲ ಕಾದಂಬರಿಯನ್ನು 'ವೃದ್ಧ ಸ್ಯಾಂಟಿಯಾಗೋ ಮತ್ತು ಸಮುದ್ರ ' ಎಂಬ ಹೆಸರಿನಿಂದ ಕನ್ನಡಿಸಿದ್ದಾರೆ. The Eternal glory ಬೆಳವಲದ ಬೆಡಗು, ಪ್ರತಿಕ್ಷೆ, ಸಂಗೀತದಲ್ಲಿ ಋತುಗಳು, The silent seasons, ಕನ್ನಡ ಕಾವ್ಯ ಸ್ಥಿತ್ಯಂತರಗಳು ಇವು ಇವರ ಇತರ ಕೃತಿಗಳು, ಸದ್ಯ ಬನಹಟ್ಟಿಯಲ್ಲಿ ನೆಲೆಸಿ ಸಾಹಿತ್ಯ ಸೇವೆಯನ್ನು ಮಾಡುತ್ತಿದ್ದಾರೆ.

**ಶ್ರೀ ಅಪ್ಪಾಸಾಹೇಬ ಮಲಕಪ್ಪ ಅಲಿಬಾದಿ : (೦೧-೦೯-೧೯೬೧)**

ಅಥಣಿ ತಾಲೂಕಿನ ಕನ್ನಾಳ ಗ್ರಾಮದವರು. ಅಪ್ಪಾಸಾಹೇಬ ಅಲಿಬಾದಿ ಅವರು ವೃತ್ತಿಯಿಂದ ಜೀವ ವಿಮಾ ನಿಗಮದ ಸಂಜೀವಿಯಾದರೆ ಪ್ರವೃತ್ತಿಯಿಂದ ಭಾವ ವಿಮಾ ನಿಗಮದ ಕವಿ. ಬಹುಕೋಟಿ ಮೊತ್ತದ ಜೀವಗಳೊಂದಿಗೆ ಒಡನಾಟ ಹೊಂದಿರುವ ಇವರು ಜೀವಭಾವಗಳೊಂದಿಗೆ ಸ್ಪಂದಿಸುವ ಸಂವೇದನಾಶೀಲ ವ್ಯಕ್ತಿಯಾಗಿದ್ದಾರೆ. ಆಳವಾದ ಅಧ್ಯಯನ, ವೈಜ್ಞಾನಿಕ- ವೈಚಾರಿಕ ದೃಷ್ಟಿಕೋನ, ಜೀವ ಪರ ನಿಲವು, ಸಮಷ್ಠಿ ಚಿಂತನ ಒಲವುಗಳನ್ನು ಮೈಗೂಡಿಸಿಕೊಂಡ ಸ್ನೇಹ ಜೀವಿಯಾಗಿದ್ದಾರೆ.

ಅಪ್ಪಾಸಾಹೇಬ ಅಲಿಬಾದಿ ಅವರು ಹೀಗೆ ಕವಿ, ಸಾಹಿತಿ, ಪ್ರಕಾಶಕರಾಗಿದ್ದಾರೆ. ಶ್ರೇಷ್ಠ ವಾಗ್ಮಿಗಳು,

ಕನ್ನಡ ಪರ ಹೋರಾಟಗಾರರು, ಸಂಘಟಕರು ಆಗಿದ್ದಾರೆ. ಸಾಮಾಜಿಕ ಕಾರ್ಯಕರ್ತರಾಗಿರುವ ಇವರು ಹಲವು ಸಂಘ ಸಂಸ್ಥೆಗಳನ್ನು ಸ್ಥಾಪಿಸಿ ಕಳೆದ ಮೂರು ದಶಕಗಳಿಂದ ಸಾಹಿತ್ಯ ಸೇವೆಯಲ್ಲಿ ತೊಡಗಿದ್ದಾರೆ. 'ವಿನೂತನ ವಿಚಾರ ವೇದಿಕೆ'ಯ ಸಂಸ್ಥಾಪಕ ಅಧ್ಯಕ್ಷರಾಗಿ, ಚುಟುಕು ಸಾಹಿತ್ಯ ಪರಿಷತ್ ಜಿಲ್ಲಾ ಉಪಾಧ್ಯಕ್ಷರಾಗಿ, ಕರ್ನಾಟಕ ರಾಜ್ಯ ಮಕ್ಕಳ ಸಾಹಿತ್ಯ ವೇದಿಕೆಯ ತಾಲೂಕಾ ಘಟಕದ ಅಧ್ಯಕ್ಷರಾಗಿ, ಸಾಹಿತ್ಯ ಸಾಂಸ್ಕೃತಿಕ ಸಂಘ, ಅಥಣಿ ಕಾರ್ಯದರ್ಶಿಗಳಾದ್ದಾರೆ.

ಇತರ ಕವಿ ಸಾಹಿತಿಗಳು :

'ಲಿಂಗರಾಜ ಸಾಹಿತ್ಯ ಪ್ರತಿಷ್ಠಾನ' ದ ಮೂಲಕ ಶಿವಣ್ಣಾ ಹಂಜಿ ಅವರು ಉತ್ತಮ ಸಾಹಿತಿಗಳನ್ನು ಗುರುತಿಸಿ, ಗೌರವಿಸುವ ಕೆಲಸದಲ್ಲಿ ತೊಡಗಿದ್ದಾರೆ. 'ಅಂತರಾಳ' ದ ಕವಿ ಸಿ.ಎ. ಇಟ್ನಾಳಮಠ 'ಶ್ರೀ ಮರುಳ ಶಂಕರ ಸಾಹಿತ್ಯ ಪ್ರತಿಷ್ಠಾನ'ವನ್ನು ಸ್ಥಾಪಿಸಿದ್ದಾರೆ. 'ಕಾಮನ ಬಿಲ್ಲಿನ ' ಅರುಣಕುಮಾರ ರಾಜಮಾನೆ, 'ಶ್ರೀರಾಮದಾಸ ಚರಿತಾಮೃತ' ಕಾವ್ಯದ ಬಾಳಕೃಷ್ಣ ಜೇರೆ, ಕಾದಂಬರಿಕಾರ ಅಪ್ಪಣ್ಣ ರಾಮಚಂದ್ರ ಶಿರೋಳ, ಉಗಾರ ಖುರ್ದದ 'ಪ್ರೇಮಲತೆ' ಯ ಕವಿ ಸುಖದೇವ ಕೋಳಿ, ಶೇಡಬಾಳದ ಮಕ್ಕಳ ಸಾಹಿತಿ ಯ.ಚೆಂ. ಬಸಪ್ಪಗೋಳ, 'ತೆನೆ ತುಂಬಿ ನಿಂತಾವ'ದ ಪ್ರೊ. ಶಿವಾನಂದ ಗುರವ, ತೆಲಸಂಗದ 'ವಚನ ಗಂಗಾ' ರಚಿಸಿದ ರಾಯಪ್ಪ ಈಟಿ, 'ಜೊಲ್ಲು' ಕವಿ ಶೆಲ್ಲೆಪ್ಪಗೋಳ, ಕಾರ್ಗಿಲ್ ಯೋಧರು ಕೃತಿಯ ಬನಾಪ್ಪಗೋಳ, 'ಧರ್ಮ ದೃಷ್ಟಾರ' ಕತೃ ಮಹಾಂತೇಶ ಎಸ್. ಉಕ್ಕಲಿ. 'ಧರ್ಮ ನಿಧಿಯ' ವಚನಗಳು ಖ್ಯಾತಿಯ ನಾಗರಾಜ ಕಳ್ಳಿಗುದ್ದಿ, ಜಿ.ಬಿ. ಕುಂಬಾರ, ಪ್ರಾ.ಟಿ. ಎಪ್. ಮೂರಶಿಳ್ಳಿನ, ಪ್ರೊ. ಎಸ್. ಎಂ. ಗೌಡರ, ಪ್ರೋ. ಎಸ್.ವಾಯ್. ಹಂಜಿ, ವಿರೂಪಾಕ್ಷ ಬಡಿಗೇರ ಮುಂತಾದ ಎಲೆಯ ಮರೆಯ ಕಾಯಿಯಂತೆ ಇರುವ ಎಲ್ಲರನ್ನು ಸ್ಮರಿಸದೆ ಅಥಣಿ ತಾಲೂಕಿನ ಸಾಹಿತ್ಯ ಚರಿತ್ರೆ ಪೂರ್ಣಗೊಳ್ಳುವುದಿಲ್ಲ. ಅಥಣಿಯ ಪ್ರೊ. ಜಿ.ಎಂ. ದೇಶಪಾಂಡೆ, ಅಪ್ಪಾಸಾಬ ಪೂಜಾರಿ, ಗೋವಿಂದ ದ. ಗುರವ, ಆರ್. ಜಿ. ಗುಂಡಾ, ಸತ್ತಿಯ ಶಂಕರಗೌಡಾ ಪಾಟೀಲ, ಖವಟಕೊಪ್ಪದ ಭೀಮಗೌಡ ತೀರ್ಥ, ಮುಳವಾಡದ ಕಲ್ಲಿನಾಥ ಕಾತ್ರಾಳೆ, ಶೇಡಬಾಳದ ಎಂ.ಡಿ. ಅಲಾಸೆ, ಶಿರಗುಪ್ಪಿಯ ಡಾ. ಭೋಮಾಜ, ಅಥಣಿಯ ನಾ.ದ. ಒಡೆಯರ,ಶಂಕರ ಮೊರಗಿ, ಕಾಗವಾಡದ ವಿಶ್ವನಾಥ ಗಾಂವಕರ, ನಾಟಕಕಾರ ಲೇಖಕರಾದ ಕಾಗವಾಡದ ರಾವಸಾಹೇಬ ಪಾಟೀಲ, ಪ್ರಭಾಕರ ಬಿಳ್ಳೂರ, ಸತ್ತಿಯ ಲೇಖಕ ನಾಟಕಕಾರ ಶಂಕಗೌಡ ಪಾಟೀಲ, ಸತ್ತಿಯವರಾದ ಡಾ॥ ಪದ್ಮನಾಭ ಕುಲಕರ್ಣಿ, ವಾಮನ ಕುಲಕರ್ಣಿ, ಎಸ್.ಕೆ. ಕುಲಕರ್ಣಿ, ಎ. ಆರ್. ಕುಲಕರ್ಣಿ, ಡಾ॥ ಸುಹಾಸ ಕುಲಕರ್ಣಿ, ಬಿ. ಎಂ. ಮುಜಾವರ, ಮಲ್ಲಿಕಾರ್ಜುನ ಸಿಂಧೂರ, ಮಲ್ಲಿಕಾರ್ಜುನ ಕನಶೆಟ್ಟಿ, ವಿಜಯ ಅಡಹಳ್ಳಿ, ಕೆ. ಎಸ್. ಮದಭಾವಿ, ಉದಯ ಕುಲಕರ್ಣಿ, ಜಿ.ಆರ್. ಜೋಶಿ, ಡಾ॥ ಜಿ.ಪಿ. ಮನಗೂಳಿ. ಮೊದಲಾದವರ ಸಾಹಿತ್ಯ ಸೇವೆಯನ್ನು ಉಪೇಕ್ಷಿಸಲಾಗದು.

ಈ ರೀತಿಯಾಗಿ ಅಥಣಿ ಸಾಹಿತ್ಯ ಪರಪಂರೆ ನಿರಂತರವಾಗಿ ಪ್ರಾಚೀನ ಕಾಲದಿಂದಲೂ ಸಾಗಿಬಂದಿದೆ. ಮಧ್ಯಕಾಲಿನ ಸಾಹಿತ್ಯದ ಬಗ್ಗೆ ಇನ್ನೂ ಸಂಶೋಧನೆ ಆಗಬೇಕಾಗಿದೆ.

★ ★ ★

## ಅಡಿ ಟಿಪ್ಪಣಿಗಳು

೧) ಹಿರೇಮಠ ಆರ್. ಎಸ್.

ಕರ್ನಾಟಕ ಭಾರತಿ

೨) ಅನ್ಯೂವಲ್ ರಿಪೋರ್ಟ -೧೯೮೩-೮೪

ಪು. ೬೭

೩) ಸೂರ್ಯನಾಥ ಯು. ಕಾಮತ್

ಬೆಲ್‌ಗಮ್ ಡಿಸ್ಟ್ರಿಕ್ಟ ಗೇಜೆಟಿಯರ್ ೧೯೮೧

ಪು. ಸಂ.

೪) ಅಥಣಿ ತಾಲೂಕು : ಸಮಗ್ರ ದರ್ಶನ

ಲೇ: ಪ್ರೋ॥ ವಸಂತಾ ಬ. ಕಲ್ಯಾಣಿ

೨೦೦೭

ಪು.ಸಂ. ೧೩೮

೫) ಸುವರ್ಣ ಸುಗಂಧ

ಸ್ಮರಣ ಸಂಚಿಕೆ. ೨೦೦೮

ಪ್ರಕಾಶನ: ಸಾಹಿತ್ಯ ಸಾಂಸ್ಕೃತಿಕ ಸಂಘ, ಅಥಣಿ.

ಲೇಖಕರು : ಅಪ್ಪಾಸಾಹೇಬ ಅಲಿಬಾದಿ

ಪು.ಸಂ. ೫೮-೬೬

# ಅಧ್ಯಾಯ –೫

# ಅಥಣಿ ಪರಿಸರದ ಪ್ರಮುಖ ದೇವಾಲಯಗಳು ಮತ್ತು ಮಠಗಳು.

ಅಥಣಿ ಪರಿಸರದ ದೇವಾಲಯಗಳ ಕುರಿತು ಅಲ್ಲಲ್ಲಿ ಅಧ್ಯಯನಗಳು ಹೊರಬಂದಿವೆ. ಕರ್ನಾಟಕದಲ್ಲಿ ನಿರ್ಮಿಸಿದ ದೇವಾಲಯಗಳು ಹೆಚ್ಚಾಗಿ ಆದಿ ಕದಂಬ, ಬಾದಾಮಿ ಚಾಲುಕ್ಯರು, ಕಲ್ಯಾಣ ಚಾಲುಕ್ಯರ, ಕಲಚೂರಿಗಳು, ಹೊಯ್ಸಳ, ಸೇವುಣ, ವಿಜಯನಗರ ಕಾಲಕ್ಕೆ ಸೇರಿದ್ದಾಗಿವೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಕಲ್ಯಾಣಚಾಲ್ಯಕ್ಯರ, ಕಲಚೂರಿಗಳು, ದೇವಗಿರಿ ಯಾದವರ ಹಾಗೂ ಶಿಲಾಹಾರರ ಕಾಲದ ದೇವಾಲಯಗಳು ಅಸ್ತಿತ್ವದಲ್ಲಿದ್ದವೆಂಬುದು ಈ ಪ್ರದೇಶದ ಶಾಸನಗಳಿಂದ ತಿಳಿದು ಬರುತ್ತದೆ.[೧]

ಅಥಣಿ ಪ್ರದೇಶದ ಅನ್ವೇಷಣೆಯಿಂದ ದೇವಾಲಯಗಳು ಈ ಭಾಗದಲ್ಲಿರುವುದು ಕಂಡು ಬಂದಿವೆ. ಈ ಪ್ರದೇಶದ ಶಾಸನಗಳಲ್ಲಿ ಸುಮಾರು ೩೦ ದೇವಾಲಯಗಳ ಉಲ್ಲೇಖಗಳಿವೆ. ಹೆಚ್ಚಿನ ದೇವಾಲಯಗಳು ಈಗ ನಾಶವಾಗಿವೆ. ಕೆಲವು ಮಾತ್ರ ಉಳಿದುಕೊಂಡಿವೆ. ಪ್ರಸ್ತುತ ಅಧ್ಯಯನ ಪರಿಸರದ ದೇವಾಲಯಗಳ ನಿರ್ಮಾಣ ಚಟುವಟಿಕೆಗಳಿಗೆ ಪ್ರೋತ್ಸಾಹ ಮತ್ತು ದಾನದತ್ತಿಗಳ ಮೂಲಕ ಅವುಗಳಿಗೆ ಪೋಷಣೆ ಒದಗಿಸುವದರಲ್ಲಿ ಕಲ್ಯಾಣ, ಚಾಲುಕ್ಯರು, ಕಲಚೂರ್ಯರು, ಯಾದವರು, ಮತ್ತು ಶಿಲಾಹಾರ ಮನೆತನಗಳು ಗಮನಾರ್ಹವಾದ ಸೇವೆ ಸಲ್ಲಿಸಿವೆ.

ಕ್ರಿ.ಶ. ೧೧೧೫ ರ ರಾಮತೀರ್ಥದ ಶಾಸನವೊಂದು ರಾಮೇಶ್ವರ ದೇವಾಲಯದ ಪೂಜೆ, ಸನ್ಯಾಸಿಗಳ ಪೋಷಣೆಗೆ ದೇವಾಲಯದ ದುರಸ್ತಿಗೋಸ್ಕರ ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ.

ಕ್ರಿ.ಶ. ೧೧೨೨ ರ ತೆಲಸಂಗ ಶಾಸನವೊಂದು ಆರನೆಯ ವಿಕ್ರಮಾಧಿತ್ಯನದಾಗಿದ್ದು ರೇವನೇಶ್ವರ ದೇವಾಲಯಕ್ಕೆ ೧೨ ಮತ್ತಿತರ ಭೂಮಿಯನ್ನು ದಾನ ಮಾಡಿದ್ದನ್ನು ಉಲ್ಲೇಖಿಸುತ್ತದೆ. ಈಗ ಈ ದೇವಾಲಯವು ಕಂಡು ಬರುವದಿಲ್ಲ.

ಕ್ರಿ. ಶ. ೧೧೬೬ರ ರಾಮತೀರ್ಥದ ಶಾಸನವೊಂದು ರಾಮೇಶ್ವರ ದೇವಾಲಯಕ್ಕೆ ತೆರಿಗೆಯ ಅಧಿಕಾರಿಯಾಗಿದ್ದ ನಾಗದೇವಯ್ಯ ಎಂಬುವನು ಆಡಳಿತಕ್ಕೆ ಅನುಕೂಲವಾಗಲೆಂದು ಆಡಳಿತದ ಆಧೀನದಲ್ಲಿದ್ದ ಸಿಂಧೂರಿನ ನಾಗನೂರ ಎಂಬಲ್ಲಿ ಕುದುರೆಗಳ ಮೇಲಿನ ತೆರಿಗೆಯನ್ನು ಭುಜಬಲ ಚಕ್ರವರ್ತಿ ಬಿಜ್ಜಳ ದೇವರಸನ ಆದೇಶದಂತೆ ತೆಗೆದು ಹಾಕಿದನೆಂದು ಉಲ್ಲೇಖಿಸುತ್ತದೆ.

ಕ್ರಿ. ಶ. ೧೧೬೭ ರ ಕೊಕಟನೂರ ಶಾಸನವೊಂದು ಕಲಚೂರಿ ರಾಯಮೂರಾರಿ ಸೋವಿದೇವನ ಆಳ್ವಿಕೆಗೆ ಸಂಬಂಧಿಸಿದ್ದು ಕೊಕಟನೂರ ಅಗ್ರಹಾರದಲ್ಲಿದ್ದ ಸ್ವಯಂಭು ವಿಶ್ವೇಶ್ವರ ದೇವಾಲಯ ತುಂಗಳ ೩೦ ದ ನಾಗರಾಳಕ್ಕೆ ಸಂಬಂಧಿಸಿದ ಭೂಮಿಯನ್ನು ಆಚಾರ್ಯನಾದ ವಿದ್ಯಾರಸಿ ಪಂಡಿತನಿಗೆ ಅರಸನು ದಾನ

ನೀಡಿದ ಬಗ್ಗೆ ಉಲ್ಲೇಖಿಸುತ್ತದೆ.

ಕ್ರಿ. ಶ. ೧೧೫೬ ಬಳ್ಳಿಗೇರಿ ಶಾಸನವೊಂದು ಪಾರ್ಶ್ವನಾಥ ತೀರ್ಥಂಕರರ ಬಸದಿಗೆ ದಿನನಿತ್ಯ ಪೂಜೆಗಾಗಿ ಹೂದೋಟವನ್ನು ದಾನ ನೀಡಿದ್ದನ್ನು ಉಲ್ಲೇಖಿಸಿದೆ.

ಕ್ರಿ.ಶ. ೧೨೨೫ ರ ಯಂಕಟ್ಟಿ ಶಾಸನವೊಂದು, ಕೊಪ್ಪನಾ ಥ ದೇವಾಲಯದ ಬಗ್ಗೆ ಉಲ್ಲೇಖಿಸುತ್ತದೆ. ಆದರೆ ಈಗ ಈ ದೇವಾಲಯವು ಕಂಡು ಬರುವದಿಲ್ಲ.[೨]

ಅಥಣಿ ಪ್ರದೇಶದಲ್ಲಿ ಏಕಕೂಟ, ದ್ವಿಕೂಟ ಮತ್ತು ತ್ರಿಕೂಟ ಮಾದರಿಯ ತಲವಿನ್ಯಾಸವನ್ನು ಹೊಂದಿರುವ ದೇವಾಲಯಗಳು ಕಂಡು ಬಂದಿರುತ್ತದೆ. ಇಲ್ಲಿ ನಿರ್ಮಿತವಾಗಿರುವ ದೇವಾಲಯಗಳು ಪ್ರಾಚೀನ ಶೈಲಿಯ ತಲವಿನ್ಯಾಸ ಹಾಗೂ ಐತಿಹಾಸಿಕ ಮಹತ್ವ ಹೊಂದಿದ್ದು ಕಲಾತ್ಮಕವಾಗಿವೆ. ಎಲ್ಲ ದೇವಾಲಯಗಳು ನಿರಂಧಾರ (ಪ್ರದಕ್ಷಿಣ ಪಥವಿಲ್ಲದ) ಮಾದರಿಯಲ್ಲಿವೆ. ಇಂತಹ ಪ್ರಾಚೀನ ಶೈಲಿಯ ದೇವಾಲಯಗಳು ಸತ್ತಿ, ರಾಮತೀರ್ಥ, ಕೊಕಟನೂರ, ಕೊಕಟನೂರ, ಕೊಟ್ಟಲಗಿ, ಶೇಡಬಾಳ, ಸಪ್ತಸಾಗರ, ಕಾಗವಾಡ, ಐನಾಪೂರ, ಬಳ್ಳಿಗೇರಿ, ಅಥಣಿ, ಮದಭಾವಿ, ನಂದಗಾಂವ, ತೆಲಸಂಗ, ಉಗರ ಖುರ್ದ, ಕೋಹಳ್ಳಿ, ಸವದಿ ಹಾಗೂ ಯಂಕಚ್ಚಿಯಲ್ಲಿ ಕಂಡುಬಂದಿರುತ್ತವೆ.

ಪ್ರಸ್ತುತ ಅಧ್ಯಯನ ಪ್ರದೇಶದ ಈ ಮೇಲಿನ ಎಲ್ಲ ಸ್ಥಳಗಳಲ್ಲಿರುವ ದೇವಾಲಯಗಳಲ್ಲಿ ಏಕಕೂಟ ಮಾದರಿಯ ದೇವಾಲಯಗಳೇ ಹೆಚ್ಚಿನ ಪ್ರಮಾಣದಲ್ಲಿವೆ. ಇವುಗಳ ತಲವಿನ್ಯಾಸದಲ್ಲಿ ಗರ್ಭಗೃಹ, ಅಂತರಾಳ, ನವರಂಗ ಹಾಗೂ ಮುಖಮಂಟಪಗಳ ಜೊತೆಗೆ ಮಹಾಮಂಟಪದ ಪ್ರಕಾರ ದ್ವಾರಮಂಟಪ ಹಾಗೂ ಗೋಪುರಗೊಳಿವೆ.

ದ್ವಿಕೂಟ - ಮಾದರಿಯ ತಲವಿನ್ಯಾಸ ಹೊಂದಿದ ದೇವಾಲಯಗಳಿಗೆ ಎಲ್ಲೆಲ್ಲಾ ಎರಡು ಗರ್ಭಗೃಹಗಳು ಎರಡು ಅಂತರಾಳ (ಅರ್ಧಮಂಟಪ) ಗಳು ಇವುಗಳಿಗೆ ಹೊದಿಕೊಂಡು ವಿಶಾಲವಾದ ನವರಂಗ ಹಾಗೂ ಮುಖಮಂಟಪಗಳಿರುತ್ತವೆ. ತ್ರಿಕೂಟ ಹೆಸರೇ ಸೂಚಿಸುವಂತೆ ಮೂರು ಶಿಖರ (ಮೂರು ಭಿನ್ನ ಗರ್ಭಗೃಹ) ಗಳುಳ್ಳ ದೇವಾಲಯವಾಗಿವೆ. ಇಂತಹ ದೇವಾಲಯಗಳಲ್ಲಿ ಇಂತಹದೇ ದೇವರುಗಳಿರಬೇಕೆಂಬ ನಿಯಮವಿರಲಿಲ್ಲ. ಮಧ್ಯದಲ್ಲಿ ಹೆಚ್ಚಾಗಿ ಈಶ್ವರ ಮತ್ತು ಕೇಶವ ದೇವರುಗಳಿದ್ದರೆ ಒಂದೊಂದು ಕಡೆ ಬ್ರಹ್ಮ, ವಿಷ್ಣು, ಮಹೇಶ್ವರ ದೇವತೆಗಳಿರುವದು ಸರ್ವೆ ಸಾಮಾನ್ಯ.[೩]

೧) ಐನಾಪೂರ

ಅಥಣಿಯಿಂದ ನೈರುತ್ಯಕ್ಕೆ ೨೪ ಕಿ.ಮೀ ಅಂತರದಲ್ಲಿದೆ. ಕೃಷ್ಣಾ ನದಿಯು ಸ್ವಲ್ಪೇ ಅಂತರದಲ್ಲಿ ಹರಿದಿದೆ. ಪ್ರಾಗೈತಿಹಾಸ ಕಾಲದಿಂದಲೂ ತನ್ನ ಪ್ರಾಮುಖ್ಯತೆಯನ್ನು ಉಳಿಸಿಕೊಂಡು ಬಂದಿದೆ. ಇಲ್ಲಿ ಪ್ರಾಚೀನ ಶೈಲಿಯ ಮೂರು ದೇವಾಲಯಗಳಿವೆ. ಅವುಗಳ ವಾಸ್ತು ವಿವರಣೆಯನ್ನು ಈ ಕೆಳಗಿನಂತೆ ಚರ್ಚಿಸಲಾಗಿದೆ.

೮) ವಿಶ್ವನಾಥ ದೇವಾಲಯ

ಈ ದೇವಾಲಯವು ಗ್ರಾಮದ ಹೊರಭಾಗದಲ್ಲಿದ್ದು ಪೂರ್ವಾಭಿಮುಖವಾಗಿದೆ. ಇದು ಏಕಕೂಟ ಮಾದರಿಯ ದೇವಾಲಯವಾಗಿದ್ದು, ಈ ದೇವಾಲಯದ ಗೋಡೆಗೆ ಸುಣ್ಣ ಬಣ್ಣದಿಂದ ಇತ್ತೀಚಿಗೆ ಲೇಪನ ಮಾಡಲಾಗಿದೆ. ಗರ್ಭಗೃಹದ ಮೇಲೆ ಕದಂಬ ನಾಗರ ಶಿಖರವಿದೆ. ಗರ್ಭಗೃಹದ ತಲಾ ವಿನ್ಯಾಸವು ನಕ್ಷತ್ರಾಕಾರವಾಗಿರುವದು ವಿಶೇಶವಾಗಿದೆ. ಸುಮಾರು ಕ್ರಿ.ಶ. ೧೨ ನೆಯ ಶತಮಾನದ ಈ ದೇವಾಲಯವು ಕಪ್ಪು ಮಿಶ್ರಿತ ನೀಲಿಛಾಯೆಯ ಬಳಪದ (ಡಾಲರೈಟ್) ಕಲ್ಲಿನಲ್ಲಿ ನಿರ್ಮಾಣಗೊಂಡಿದೆ.

ಗರ್ಭಗೃಹ

ಅದರ ಗರ್ಭಗೃಹ ೨.೬೮ ಮೀ ಅಗಲ ಹಾಗೂ ೨ ಮೀ ಉದ್ದವಾಗಿದೆ. ಗರ್ಭಗೃಹದಲ್ಲಿ ನಾಲ್ಕು ಮೂಲೆ ಕಂಬಗಳಿವೆ. ಗೋಡೆಯ ಮಧ್ಯದಲ್ಲಿ ಮುಂದೆ ಬಂದ ಭಾಗವನ್ನು ಅಳವಡಿಸಲಾಗಿದೆ. ಮಧ್ಯದಲ್ಲಿ ಯೋನಿಫೀಠಯುಳ್ಳ ಲಿಂಗವಿದ್ದು ಜಲಹರಿಯನ್ನು ಹೊಂದಿದೆ. ಲಿಂಗದ ಅಧಿಷ್ಠಾನವು ವೃತ್ತಾಕಾರದಲ್ಲಿದ್ದು ಕದಂಬ ನಾಗರ ಶೈಲಿಯ ಶಿಖರವನ್ನು ಹೊಂದಿದೆ.

ಈ ದೇವಾಲಯದ ಗರ್ಭಗೃಹಕ್ಕೆ ಹೊಂದಿ ಅಂತರಾಳವಿದೆ. ಅದು ಗರ್ಭಗೃಹದಷ್ಟೇ ಒಳವಿನ್ಯಾಸವನ್ನು ಹೊಂದಿದೆ. ಇದರಲ್ಲೂ ನಾಲ್ಕು ಮೂಲೆಕಂಬಗಳಿವೆ. ಛಾವಣಿಯಲ್ಲಿ ಇಳಿಬಿದ್ದ ಕಮಲಶಿಲ್ಪ ವಿರುವ ಭುವನೇಶ್ವರಿವಿದೆ. ದ್ವಾರದ ಎರಡು ಪಕ್ಕದಲ್ಲಿ ಜಾಲಂದ್ರಗಳನ್ನು ಅಳವಡಿಸಲಾಗಿದೆ. ಈ ದೇವಾಲಯದ ನವರಂಗವು ೫.೯೦ ಮೀ ಉದ್ದಗಲವಿದೆ. ನವರಂಗದಲ್ಲಿ ೧೬ ಕಂಬಗಳಿವೆ. ಅವುಗಳಲ್ಲಿ ನಾಲ್ಕು ಕಂಬಗಳು ಮಧ್ಯದ ಚರ್ತುರಾಕಾರದ ನಂದಿಯ ಪೀಠದ ನಾಲ್ಕು ಮೂಲೆಗಳಿದ್ದು ಪೂರ್ಣಕಂಬಗಳು ಹಾಗೂ ಉಳಿದವು ಗೋಡೆಯ ಅರ್ಧಕಂಬಗಳಾಗಿ ಛಾವಣಿಯ ಭಾರವನ್ನು ಹೊತ್ತು ನಿಂತಿವೆ.

ನವರಂಗಕ್ಕೆ ಹೊಂದಿ ಮುಖಮಂಟಪವಿದ್ದು ಇದು ಚತುಸ್ರಾಕಾರದ ಜಗಲಿ ಅಥವಾ ಫೀಠಾಧಾರಿತವಾಗಿ ಕಟ್ಟಲ್ಪಟ್ಟಿದೆ. ಇದಕ್ಕೆ ಪಾರ್ಶಗೋಡೆಗಳಿರುವದಿಲ್ಲ. ಕೇವಲ ಮಂಟಪದ ಹಾಗೇ ಇದೆ. ಈ ಪೀಠದ ನಾಲ್ಕು ಮೂಲೆಗಳಲ್ಲಿ ನಾಲ್ಕು ಪೂರ್ಣಕಂಬಗಳಿದ್ದು. ಮೇಲೆ ದಪ್ಪವಾದ ಮೇಲ್ಛಾವಣಿಯನ್ನು ಹೊತ್ತಿದೆ. ಮೇಲ್ಛಾವಣಿಯ ಭುವನೇಶ್ವರಿ ಇದೆ. ಅದಕ್ಕೆ ಮೂರು ಪ್ರವೇಶದ್ವಾರಗಳನ್ನು ಹೊಂದಿದೆ. ಈ ದ್ವಾರಗಳು ಎತ್ತರ ಹಾಗೂ ಅಗಲದಲ್ಲಿ ಸಮಾನವಾದ ವ್ಯಾಸವನ್ನು ಹೊಂದಿವೆ. ಗರ್ಭಗೃಹದ ದ್ವಾರವು ಬಿಂಬದಲ್ಲಿ ಗಣಪತಿಯ ಉಬ್ಬು ಶಿಲ್ಪವಿದೆ.

ಅಂತರಾಳ ಹಾಗೂ ನವರಂಗದ ದ್ವಾರದ ಲಲಾಟ ಬಿಂಬಗಳಲ್ಲಿ ಕೇವಪಟ್ಟಿಕೆಗಳಿದ್ದು ಕಮಲದ ಬಿಂಬಗಳಿವೆ. ಈ ಮೂರು ಪ್ರವೇಶ ದ್ವಾರಗಳು ಶಾಖೆಗಳನ್ನು ತೋರಣಗಳನ್ನು ಹೊಂದಿರದೇ ಸಾದಾರೀತಿಯಾಗಿವೆ. ಆದರೆ ದ್ವಾರದ ಪಾರ್ಶ್ವ ಶಾಖೆಗಳು ಅಗಲವಾಗಿದ್ದುದನ್ನು ಕಾಣುತ್ತೇವೆ.

ಕಂಬಗಳು

ದೇವಾಲಯವು ಚಾಲುಕ್ಯ ಶೈಲಿಯ ಕಂಬಗಳನ್ನು ಹೊಂದಿದೆ. ಈ ದೇವಾಲಯದಲ್ಲಿ ಸುಮಾರು ೨೮ ಕಂಬಗಳಿವೆ. ಆವುಗಳಲ್ಲಿ ನಾಲ್ಕು ನವರಂಗದಲ್ಲಿ ನಾಲ್ಕು ಮುಖಮಂಟಪದಲ್ಲಿದ್ದು, ಇನ್ನುಳಿದ

ಕಂಬಗಳು ಮೂಲೆ ಹಾಗೂ ಗೋಡೆಗಳ ಅರ್ಧ ಕಂಬಗಳಾಗಿವೆ. ಈ ಎಲ್ಲ ಕಂಬಗಳು ಪೀಠಾಧಾರಿತವಾಗಿದ್ದು, ಆಕರ್ಷಣೀಯವಾಗಿವೆ. ಗೋಡೆಗಳಲ್ಲಿರುವ ಅರ್ಧಗಂಬಗಳು ಚೌಕಾಕಾರದಲ್ಲಿದ್ದು ನಿರಾಲಂಕಾರವಾಗಿದೆ. ಪೂರ್ಣ ಕಂಬಗಳು ಅಲಂಕಾರವಾಗಿವೆ. ಕಂಬಗಳ ಅಧಿಷ್ಠಾನವು ೦.೨೮ ಮೀ ಎತ್ತರ ಹಾಗೂ ೦.೫೧ ಮೀ ಸುತ್ತಳತೆ ಹೊಂದಿದೆ. ಪೀಠದಿಂದ ೪.೧೦ ಮೀ ಎತ್ತರವಾಗಿದ್ದು ಅವು ಚೌಕಾಕಾರದ ಪೀಠ ಆಯಾತಾಕಾರದ ಭಾಗ ಅನಂತರ ೧೬ ಭುಜಗುಳುಳ್ಳ ಅಡ್ಡ ಕೊಯ್ದಾಕಾರದ ಭಾಗದ ಕೊನೆಯಲ್ಲಿ ವರ್ತುಳಕಾರದ ಬಳೆ, ಆಮಲಕದ ಭಾಗ, ಅದರ ಮೇಲೆ ಅಲಂಕಾರಕವಾದ ಭೋದುಗೆಯನ್ನು ಜೋಡಿಸಲಾಗಿದೆ. ಈ ಭೋದುಗೆಗಳು ವರ್ತುಲಾಕಾರ ಹಾಗೂ ಚೌಕಾಕಾರವಾಗಿವೆ.

### ಕೋಷ್ಟಕಗಳು

ಈ ದೇವಾಲಯದಲ್ಲಿ ನವರಂಗದ ಒಂದಕ್ಕೊಂದು ಮುಖ ಮಾಡಿ ನಿಂತ ಎದರು ಬದುರಿನ ಗೋಡೆಗಳೆರಡರ ಒಳ ಭಾಗದಲ್ಲಿ ಎರಡು ದೇವಕೋಷ್ಟಕಗಳಿವೆಯಾದರೂ ಅವುಗಳಲ್ಲಿ ಮೂರ್ತಿಗಳಿರುವದಿಲ್ಲ. ಇವು ಮಂಜೂರಿನಂತೆ ಭಾಗಗಳಾಗಿದ್ದು ಅವುಗಳ ಮೇಲೆ ದ್ರಾವಿಡ ಮಾದರಿಯ ಮೂರು ಚಿಕ್ಕ ಗಾತ್ರದ ಶಿಖರಗಳಿವೆ.

### ಜಾಲಂದ್ರಗಳು

ಈ ದೇವಾಲಯದ ಅಂತರಾಳದ ದ್ವಾರದ ಎರಡು ಪಕ್ಕದಲ್ಲಿ ಜಾಲಂದ್ರಗಳಿವೆ. ಈ ಜಾಲಂದ್ರಗಳು ನಕ್ಷತ್ರಾಕಾರವಾಗಿದ್ದು ಒಂದರ ಮೇಲೊಂದರಂತೆ ನಾಲ್ಕು ನಾಲ್ಕು ಶ್ರೇಣಿಗಳಿಂದ ಕೂಡಿದಾಗಿದೆ.

ಈ ದೇವಾಲಯದ ಅಧಿಷ್ಠಾನವು ನಕ್ಷತ್ರಾಕಾರದ ಪಟ್ಟಿಕೆಗಳನ್ನು ಹೊಂದಿದ್ದು ಯಾವುದೇ ತರಹದ ಅಲಂಕರಣೆ ಇದಕ್ಕೆ ಇರುವದಿಲ್ಲ. ಅದಿಷ್ಠಾನದ ಸುತ್ತಲೂ ಕಲ್ಲು ತುಂಡುಗಳ ಹಾಸಿಗೆ ಮಾತ್ರವಿದೆ.

### ಗೋಡೆ

ಈ ದೇವಾಲಯದ ಗೋಡೆಗಳು ನಿರಾಲಂಕಾರವಾಗಿವೆ. ಒಳಭಾಗ ಮತ್ತು ಹೊರಭಾಗ ಗೋಡೆಗಳ ಮೇಲೆ ಸುಣ್ಣ ಬಣ್ಣಗಳಿಂದ ಲೇಪನಗೈದಿದ್ದಾರೆ. ಗರ್ಭಗೃಹದ ಸುತ್ತಲಿನ ಹೊರಬದಿಯ ಗೋಡೆಯು ನಕ್ಷತ್ರಾಕಾರವಾಗಿದ್ದು ಮೂರು ಅಡ್ಡ ಪಟ್ಟಿಗಳಿಂದ ಕೂಡಿದೆ. ಈ ದೇವಾಲಯದ ಗರ್ಭಗೃಹದ ಮೇಲೆ ಶಿಖರವಿದೆ. ಇದು ೧೨ ಶ್ರೇಣಿಗಳಿಂದ ಕೂಡಿದ್ದು ಮೆಟ್ಟು - ಮೆಟ್ಟಲಾಗಿ ಮೇಲೆರಿ ಕೊನೆಯಲ್ಲಿ ಅಮಲಕವನ್ನು ಹೊಂದಿದೆ. ಇದರಿಂದಾಗಿ ಈ ಶಿಖರವು ಕದಂಬ ನಾಗರ ಶೈಲಿಯ ಲಕ್ಷಣಗಳಿಂದ ಕೂಡಿದಾಗಿದೆ. ದೇವಾಲಯದ ಸೂತ್ತಲೂ ಪ್ರಾಕಾರವಿದ್ದು ದೇವಾಲಯವನ್ನು ಪ್ರವೇಶಿಸುವಂತೆ ಎದುರು ಭಾಗದಲ್ಲಿ ಪ್ರಾಕಾರಕ್ಕೆ ಪ್ರವೇಶದ್ವಾರವಿದೆ. ಇದರ ಮೇಲೆ ದ್ವಾರಗೋಪುರವಾಗಲೀ, ದ್ವಾರಬಂದಗಳಾಗಲಿ ಇರದೇ ಸಾಧಾರಣವಾಗಿದೆ. ದ್ವಾರವನ್ನು ಪ್ರವೇಶಿಸುವ ಮೊದಲು ಮೂರು ಮೆಟ್ಟಲುಗಳನ್ನೇರಿ ಒಳಗೆ ಪ್ರವೇಶಿಸಬೇಕಾಗುತ್ತದೆ.

ಜಂಬುಲಿಂಗೇಶ್ವರ ದೇವಾಲಯ

ಇದೇ ಗ್ರಾಮದ ಪಶ್ಚಿಮದ ಅಂಚಿನಲ್ಲಿ ಜಂಬುಲಿಂಗೇಶ್ವರ ದೇವಾಲಯವಿದೆ. ಸ್ಥಳೀಯರು ಇದನ್ನು ಸದ್ಯಕ್ಕೆ ಚೈತ್ರಾಯನಗುಡಿ ಎಂದು ಕರೆಯುವರು. ಈ ದೇವಾಲಯವು ಇಂದು ಯಾವುದೇ ರಕ್ಷಣೆಕ್ಕೊಳಗಾಗದೆ ಹಾಳುಬಿದ್ದಿದೆ. ಆದರೆ ನೋಡುವವರನ್ನು ಆಕರ್ಷಿಸುತ್ತದೆ. ಈ ದೇವಾಲಯ ನಿರ್ಮಾಣಗೊಂಡ ಸ್ಥಳದಲ್ಲಿ ಸುಮಾರು ನಾಲ್ಕೈದು ಎಕರೆಯಷ್ಟು ಜಮೀನವು ಹಾಳು ಮಣ್ಣಿನಿಂದ ಕೂಡಿದೆ.

ತಲವಿನ್ಯಾಸ

ಈ ದೇವಾಲಯವು ಪೂರ್ವಕ್ಕೆ ಮುಖಮಾಡಿ ಪ್ರವೇಶದ್ವಾರನ್ನು ಹೊಂದಿದೆ. ಇಂದು ಈ ದೇವಾಲಯವು ಸಂಪೂರ್ಣವಾಗಿ ಭಗ್ನಸ್ಥಿತಿಯಲ್ಲಿದ್ದು. ಗರ್ಭಗೃಹ ಮಾತ್ರ ಉಳಿದಿದೆ. ಇದರ ಕಾಲಮಾನದ ಬಗ್ಗೆ ಯಾವುದೇ ಶಾಸನಗಳು ಲಭ್ಯವಾಗಿಲ್ಲ. ಇದರ ಗರ್ಭಗೃಹದ ಮುಂದಿನ ಆಂತರಾಳ ನವರಂಗ ಹಾಗೂ ಮುಖ ಮಂಟಪಗಳು ನಾಶವಾಗಿವೆ.

ಗರ್ಭಗೃಹ

ಗರ್ಭಗೃಹದ ಒಳವಿಸ್ತೀರ್ಣ ಸ್ವಲ್ಪ ವಿಶಾಲವಾಗಿದ್ದು ೩.೦೮ ಮೀ ಚೌಕಾಕಾರದಲ್ಲಿದೆ. ಗೋಡೆಗಳು ಸರಳವಾಗಿದ್ದು ಪಾರ್ಶ್ವದ ಉತ್ತರ ದಿಕ್ಕಿನ ಗೋಡೆಯ ಮಧ್ಯದಲ್ಲಿ ಒಂದು ಕಮಾನು ಇದೆ. ಹಾಗೂ ನಾಲ್ಕು ಮೂಲೆಕಂಬಗಳಿವೆ. ಗರ್ಭಗೃಹದಲ್ಲಿ ಮೂರ್ತಿಶಿಲ್ಪವಿದೆ. ಈ ಮುಂಚೆ ಗರ್ಭಗೃಹದಲ್ಲಿ ಶಿವಲಿಂಗವಿತ್ತೆಂದು ತಿಳಿದು ಬರುತ್ತದೆ. ದೇವಾಲಯದ ಗರ್ಭಗೃಹದ ಮೇಲ್ಛತ್ತಿನಲ್ಲಿ ಅಲಂಕಾರಿಕವಾದ ಭುವನೇಶ್ವರಿ ಇದೆ. ಗರ್ಭಗೃಹದ ಮೇಲ್ಪಂಕ್ತಿ ಅಲಂಕಾರಿಕವಾದ ಭುವನೇಶ್ವರಿ ಇದೆ. ಗರ್ಭಗೃಹದ ದ್ವಾರವು ೨.೦೪ ಮೀ ಪ್ರದೇಶ ಹೊಂದಿದೆ. ಬಾಗಿಲವಾಡವು ಅಗಲವಾದ ಶಾಖೆಗಳನ್ನು ಹೊಂದಿದ್ದು ಅದರಲ್ಲಿ ವರ್ತುಲಾಕೃತಿಯ ಗಣಗಳ ಕೆತ್ತನೆ, ಲತಾಸುರಳಿ, ಪಟ್ಟಿಕೆಗಳು ಹಾಗೂ ಅರ್ಧಗಂಬಗಳ ಅಲಂಕರಣೆ ಇದೆ. ದ್ವಾರದ ಲಲಾಟದಲ್ಲಿ ಚಿಕ್ಕ ಗಣಪತಿಯ ಉಬ್ಬುಶಿಲ್ಪವಿದೆ. ಲಲಾಟಬಿಂಬದ ಮೇಲಿನ ತೋರಣವು ಶಾಲಕೂಟ ಪಂಜರಗಳನ್ನೊಳಗೊಂಡಿದ್ದು ಸೂಕ್ಷ್ಮವಾಗಿ ಕಂಡರಿಸಿದ್ದಾರೆ.

ಅಧಿಷ್ಠಾನ

ಅಧಿಷ್ಠಾನವು ಕಲ್ಯಾಣದ ಚಾಲುಕ್ಯರ ಶೈಲಿಯ ವೈಶಿಷ್ಟ್ಯಪೂರ್ಣ ಲಕ್ಷಣಗಳನ್ನು ಹೊಂದಿದೆ. ಅಂದರೆ ಅದು ನಕ್ಷತ್ರಾಕಾರದಲ್ಲಿದ್ದು ಹಿಂಬನೆ ಮುಂಬನೆಗಳಿಂದ ಕೂಡಿದೆ. ಹಾಗೆಯೇ ಇದು ಮೂರು ಅಂತಸ್ತುಗಳನ್ನು ಹೊಂದಿದ್ದು ಉಪಾನ ತಿಪಟ್ಟಕುಮುದ ಇದರ ಮೇಲೆ ಪಟ್ಟಿಕಾಭಾಗ ನಂತರ ಅಡ್ಡಕೊಯ್ದಾಕಾರದ ಅಥವಾ ಕಂಠ ಭಾಗಗಳಿವೆ.

ಭಿತ್ತಿ

ದೇವಾಲಯದ ಹೊರಬಿತ್ತಿಗಳು ಸೂಕ್ಷ್ಮ ಹಾಗೂ ನಾಜೂಕಿನ ಶಿಲ್ಪ ರಚನೆಗಳಾಗಿವೆ. ಬಿತ್ತಿಯ

ಸುತ್ತಲೂ ನಾಟ್ಯಸರಸ್ವತಿ ಹಾಗೂ ಮದನಿಕೆಯರ ಶಿಲ್ಪಗಳಿವೆ. ಹಾಗೆಯೇ ಬಿತ್ತಿಯ ಭಾಗದಲ್ಲಿ ವೇದಿಕಾ ಅಲಂಕರಣೆ, ಕುಡ್ಯಸ್ತಂಭಗಳ ಅಲಂಕರಣೆ, ಪಂಜರ, ದೇವಕೋಷ್ಟಗಳು ಹಾಗೂ ಕಂಬ ಪಂಜರಗಳು ಇವೆ. ಇವುಗಳ ಮೇಲೆ ಕಪೋತ, ವ್ಯಳವಾರಿ ಮತ್ತು ಪುಸ್ತಕ ಭಾಗಗಳಿದ್ದು ಭತ್ತಿನ ಮೇಲೆ ಹಿಂದೂ ಇಸ್ಲಾಮೀಕ್ ಶೈಲಿಯ ವರ್ತುಳಾಕಾರದ (ಗುಮ್ಮಟದಂತಿರುವ) ಶಿಖರವಿದೆ.

ಆದರೆ ಸಧ್ಯಕ್ಕೆ ಈ ದೇವಾಲಯವು ಯಾವುದೇ ಆಸರೆ ಇಲ್ಲದೇ ಅನಾಥವಾಗಿದ್ದು ನಶಿಸಿ ಹೋಗುವ ಸ್ಥಿತಿಯಲ್ಲಿದೆ. ಈ ದೇವಾಲಯದ ವಾಸ್ತುವನ್ನು ಪರಿಗಣಿಸಿದರೆ ಇದು ಸುಮಾರು ೧೧-೧೨ ನೇ ಶತಮಾನದಲ್ಲಿ ರಚಿಸಲಾದ ಪುರಾತನ ದೇವಾಲಯವೆಂದು ತಿಳಿದು ಬರುತ್ತದೆ.

೨) ಅಥಣಿ

ಅಥಣಿ ತಾಲೂಕ ಪ್ರದೇಶವಾಗಿದ್ದು ಇಲ್ಲಿ ಪ್ರಾಚೀನ ಕಾಲದ ಮೂರು - ನಾಲ್ಕು ದೇವಾಲಯ ಹಾಗೂ ಮಠಗಳನ್ನು ಕಾಣಬಹುದು. ಪ್ರಾಚೀನ ಕಾಲದಿಂದಲೂ ಚರಿತ್ರೆ ಪ್ರಸಿದ್ಧವಾದ ಸ್ಥಳವಾಗಿದೆ.

ಅಮೃತಲಿಂಗೇಶ್ವರ ದೇವಾಲಯ (ಏಕಕೂಟ)

ನಗರದ ಮಧ್ಯದಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ವಾಸ್ತು ಲಕ್ಷಣಗಳನ್ನು ಮೈಗೂಡಿಸಿಕೊಂಡು ನಿರ್ಮಿತವಾದ ಅಮೃತಲಿಂಗೇಶ್ವರ ದೇವಾಲಯವಿದೆ.(ಚಿತ್ರ ನಂ.೧) ಇದು ಶೈವ ಧರ್ಮಕ್ಕೆ ಸೇರಿದ್ದಾಗಿದೆ. ಈ ದೇವಾಲಯವನ್ನು ಸಿಸ್ಟ ಶಿಲೆಯಿಂದ ನಿರ್ಮಿಸಿರುವದು ಕಂಡುಬಂದಿದೆ.

ಈ ದೇವಾಲಯ ಗರ್ಭಗೃಹ, ನವರಂಗ, ಹಾಗೂ ಮುಖಮಂಟಪಗಳನ್ನು ಹೊಂದಿದೆ. ದುರ್ದೈವಶಾತ್ ಈ ದೇವಾಲಯದ ಕೆಲವು ಭಾಗಗಳು ಶಿಥಿಲಗೊಂಡಿದ್ದು ಇತ್ತೀಚಿಗೆ ಜೀರ್ಣೋಧ್ಧಾರಗೈಯಲಾಗಿದೆ. ಆದರೂ ಸಹಿತ ಸದ್ಯ ಉಳಿದಿರುವ ಕುರುಹುಗಳಿಂದ ಇದರ ವಾಸ್ತು ಲಕ್ಷಣದ ವಿವರವನ್ನು ಅರಿಯಬಹುದು.

ಈ ದೇವಾಲಯವು ಏಕಕೂಟ ಮಾದರಿಯ ತಲವಿನ್ಯಾಸವನ್ನು ಹೊಂದಿದ್ದು ಗರ್ಭಗೃಹ, ಅಂತರಾಳ ಹಾಗೂ ನವರಂಗಕ್ಕೆ ಹೊಂದಿಕೊಂಡು ಜೀರ್ಣೋದ್ದಾರಗೊಂಡ ಮುಖಮಂಟಪವಿದೆ. ಮುಖಮಂಟಪದ ಉತ್ತರ ದಿಕ್ಕಿನ ಗೋಡೆಗೆ ಹೊಂದಿಕೊಂಡು ಇತ್ತೀಚಿಗೆ ನಿರ್ಮಿಸಿದ ಅಧುನಿಕ ಶೈಲಿಯ ವೀರಭದ್ರ ದೇವಾಲಯವಿದೆ.

ಅಮೃತಲಿಂಗೇಶ್ವರ ದೇವಾಲಯದ ಇನ್ನುಳಿದ ಎರಡು ದಿಕ್ಕುಗಳಲ್ಲಿ ಮನೆಗಳು ಇರುವದರಿಂದ ದೇವಾಲಯದ ಎದುರಿಗೆ ಸ್ಥಳಾವಕಾಶವಿರದೇ ಇಕ್ಕಟ್ಟಿನಲ್ಲಿದ್ದು ಅದರ ಸೌಂದರ್ಯ ಅಡಗಿಹೋಗಿದೆ. ಈ ದೇವಾಲಯದ ಅಧಿಷ್ಠಾನ ಭಾಗದಿಂದ ಛಾವಣಿಯವರಿಗೆ ಮಾತ್ರ ಪ್ರಾಚೀನ ಶೈಲಿಯ ಕಟ್ಟಡವಿದ್ದು, ಛಾವಣಿಯ ಭಾಗ, ಮುಖಮಂಟಪ ಹಾಗೂ ಶಿಖರದ ಭಾಗಗಳು ಇತ್ತೀಚೆಗೆ ಜೀರ್ಣೋದ್ಧಾರಗೊಂಡಿರುತ್ತದೆ.

ಗರ್ಭಗೃಹವು ಚಿಕ್ಕದಾಗಿದ್ದು ಕತ್ತಲೆಯಿಂದ ಕೂಡಿದಾಗಿದೆ. ಗೋಡೆಗಳ ಮಧ್ಯದಲ್ಲಿ ಮುಂದೆ ಚಾಚಿಕೊಂಡ ಎರಡು ನಾಗಮಂದಿರಗಳನ್ನು ಅಳವಡಿಸಿದ್ದಾರೆ. ಗರ್ಭಗೃಹದ ಒಳಭಾಗದಲ್ಲಿ.

ಗೋಡೆಗಳನ್ನೆಲ್ಲಾ ಬಿಳಿ ಶಾಬಾದಿ ಪರಸಿ ಕಲ್ಲಿನಿಂದ ಮುಚ್ಚಿದ್ದಾರೆ. ಗರ್ಭಗೃಹದ ಮಧ್ಯದಲ್ಲಿ ಶಿವಶಿಂಗವಿದೆ. ಶಿವಲಿಂಗವು ಅತೀ ಸುಂದರವಾದ ಕಪ್ಪುಶಿಲೆಯಿಂದ ನಿರ್ಮಿತವಾಗಿದೆ. ಇದರ ಜಲಧಾರೆಯು ಉತ್ತರ ದಿಕ್ಕಿಗೆ ಇದೆ. ಲಿಂಗದ ಅಧಿಷ್ಠಾನವು ವೃತ್ತಾಕಾರವಾಗಿದೆ. ಗರ್ಭಗೃಹವು ಚತುಸ್ರಾಕಾರವಾಗಿದ್ದು ೨.೫೪ ಮೀ ಉದ್ದ ಅಗಲದ ಒಳ ವಿಸ್ತೀರ್ಣ ಹೊಂದಿದೆ.

ದೇವಾಲಯದ ಗರ್ಭಗೃಹಕ್ಕೆ ಹೊಂದಿಕೊಂಡು ತೆರದ ಅಂತರಾಳವಿದೆ. ಈ ಅಂತರಾಳವು ಸಹ ನಾಲ್ಕು ಮೂಲೆಗಳಲ್ಲಿ ಅರ್ಧಗಂಭಗಳನ್ನು ಹೊಂದಿದ ಮೇಲೆ ಭುವನೇಶ್ವರಿ ಇದೆ ಅಂತರಾಲದ ಒಳವಿನ್ಯಾಸವು ಗರ್ಭಗೃಹದಷ್ಟೇ ಇದೆ.

ಅಂತರಾಳಕ್ಕೆ ಹೊಂದಿಕೊಂಡು ವಿಶಾಲವಾದ ನವರಂಗವಿದೆ. ನವರಂಗವು ಪ್ರವೇಶದ್ವಾರದಿಂದ ಕೊಡಿದ್ದು ನವರಂಗ ದ್ವಾರದ ಎರಡೂ ಕಡೆಗಳಲ್ಲಿ ಜಾಲಂದ್ರಗಳನ್ನು ಅಳವಡಿಸಿದ್ದಾರೆ. ನವರಂಗದ ಮಧ್ಯದಲ್ಲಿ ನಂದಿಮಂಟಪವಿದೆ ಈ ನಂದಿಯು ಗರ್ಭಗೃಹದಲ್ಲಿರುವ ಲಿಂಗಕ್ಕೆದುರು ಮುಖಮಾಡಿ ಕುಳಿತಿದೆ. ನವರಂಗದಲ್ಲಿ ಸುಮಾರು ೧೬ ಕಂಬಗಳಿವೆ. ನಾಲ್ಕು ಪೂರ್ಣಾ ಕಂಬಗಳಿವೆ. ಮೇಲ್ಛಾವಣಿ ಭಾರವನ್ನು ಹೊತ್ತಿದೆ. ಉಳಿದವು ಗೋಡೆಯ ಅರ್ಧಗಂಭಗಳಾಗಿವೆ. ನವರಂಗದಲ್ಲಿ ಬರಿದಾದ ಆರು ದೇವಕೋಷ್ಟಕಗಳಿವೆ. ನವರಂಗವು ಚತುಸ್ರಾಕಾರವಾಗಿದೆ.

ಈ ದೇವಾಲಯಕ್ಕೆ ತೆರೆದ ಮುಖಮಂಟಪವಿದೆ. ಈ ಮುಖಮಂಟಪವು ಜೀರ್ಣೋದ್ಧಾರಗೊಂಡಿದೆ. ಆದರೂ ಸಹ ಇದು ನವರಂಗದಷ್ಟೇ ವಿಶಾಲವಾಗಿದೆ. ಇದರಲ್ಲಿಯೂ ಹದಿನಾರು ಕಂಬಗಳಿವೆ. ಅವುಗಳಲ್ಲಿ ಆರು ಪೂರ್ಣ ಹಾಗೂ ಉಳಿದವು ಗೋಡೆಗಳಲ್ಲಿವೆ. ಈ ಕಮಾನುಗಳಲ್ಲಿ ಯಾವುದೇ ವಿಗ್ರಹಗಳಿರುವದಿಲ್ಲ.

ಈ ದೇವಾಲಯದ ಗರ್ಭಗೃಹದ್ವಾರವು ದ್ವಾರಶಾಖೆಗಳನ್ನು ಹೊಂದಿದ್ದು, ಶಾಖೆಗಳು ಅಲಂಕೃತವಾಗಿದೆ. ದ್ವಾರಖಾಖೆಗಳ ಎರಡು ಬಾಜುವಿಗೆ ಚಿಕ್ಕ ಗಾತ್ರದ ಅರ್ಧಗಂಭಗಳ ಕೆತ್ತನೆ, ಪಟ್ಟಿಕೆಗಳು, ಹೂಬಳ್ಳಿ , ಕೆತ್ತನೆಯ ಪಟ್ಟಿ, ಲತಾಸುರುಳಿ, ಹಾಗೂ ಗಣಗಳ ಅಲಂಕರಣೆಗಳನ್ನು ಕೊರೆದಿದ್ದಾರೆ. ದ್ವಾರಶಾಖೆಯ ಕೆಳಭಾಗ ಹಾಗೂ ಮೇಲ್ಭಾಗವನ್ನು ಸಂಗಮರಿ ಶಾಬಾದಿಯಿಂದ ಪೂರ್ತಿಗೊಳಿಸಿದ್ದಾರೆ. ದ್ವಾರದ ಮೇಲೆ ಯಾವುದೆ ಶಿಲ್ಪಗಳು ಕಂಡುಬರುವದಿಲ್ಲ. ಲಲಾಟಬಿಂಬವು ಪೆಟ್ಟಿಗೆಯಂತೆ ಮುಂದೆ ಚಾಚಿಕೊಂಡಿದೆ. ದ್ವಾರದ ಕೆಳಭಾಗದ ಶಾಖೆಯ ಮದ್ಯದಲ್ಲಿಯೂ ಇದೇ ತೆರನಾದ ಮುಂದೆ ಬಂದ ಪೆಟ್ಟಿಗೆಯನ್ನು ಕೊರೆದಿದ್ದಾರೆ.

ಚಾಲುಕ್ಯ ಶೈಲಿಯನ್ನು ಹೋಲುವ ವಿಶಿಷ್ಟ ಕೆತ್ತನೆಯಿಂದ ಕೂಡಿರುವ ಕಂಬಗಳು ಈ ದೇವಾಲಯದಲ್ಲಿದೆ. ಅವೆಲ್ಲವು ಪೀಠಾಧಾರಿತವಾಗಿದ್ದು ಭಾರವನ್ನು ಹೊತ್ತಿವೆ. ಈ ದೇವಾಲಯದಲ್ಲಿ ಒಟ್ಟು ೩೮ ಕಂಬಗಳಿವೆ. ಅವುಗಳಲ್ಲಿ ಹತ್ತು ಕಂಬಗಳು ಪೂರ್ಣವು ಉಳಿದ ಕಂಬಗಳು ಗೋಡೆ ಹಾಗೂ

ಮೂಲೆಗಳ ಅರ್ಧಕಂಬಗಾಳಾಗಿವೆ. ಈ ಎಲ್ಲ ಕಂಬಗಳು ಆಧಾರ ಪೀಠವನ್ನು ಹೊಂದಿವೆ. ಪೀಠಗಳು ಚೌಕಾಕಾರದಲ್ಲಿದ್ದು ಅವುಗಳ ಮೇಲಿರುವ ಸ್ತಂಭಗಳು ೧.೯೪ - ೨.೧೬ ಮೀ ಸುತ್ತಳತೆಯನ್ನು ಹೊಂದಿವೆ. ಈ ಸ್ತಂಭಗಳು ಲೇಥ್‌ನಲ್ಲಿ ಸಿದ್ದಗೊಂಡಿದ್ದು ಸೂಕ್ಷ್ಮ ಕೆತ್ತನೆಯನ್ನು ಹೊಂದಿವೆ. ಕೆಳಭಾಗದಲ್ಲಿ ಅಧಿಷ್ಠಾನ ಹೊಂದಿವೆ. ಕಾಂಡ ಭಾಗವು ತಲೆ ಕೆಳಗಾದ ಗಂಟೆಯಾಕಾರದಲ್ಲಿದೆ. ಇದರ ಮೇಲ್ಭಾಗದಲ್ಲಿ ದುಂಡಾದ ಮುಚ್ಚಳವಿದೆ. ನಂತರ ಚೌಕಾಕೃತಿಯ ಫಲಕವಿದೆ.

ಈ ದೇವಾಲಯದ ಗರ್ಭಗೃಹ, ನವರಂಗದಲ್ಲಿರುವ ಭವನೇಶ್ವರಿಗಳು ಹೆಚ್ಚು ಅಲಂಕಾರವಾಗಿದ್ದು ಅದರಲ್ಲಿ ನವರಂಗದ ಮಧ್ಯದ ಅಂಕಣದಲ್ಲಿರುವ ಭುವನೇಶ್ವರಿಯ ಕಲಾ ನೈಪುಣ್ಯತೆಯಿಂದ ಕೂಡಿದೆ. ಹದಿನಾರು ಆಯತಾಕಾರದ ಕೋನವುಳ್ಳ ಪೆಟ್ಟಿಕೆಯಿದ್ದು, ನಕ್ಷತ್ರಾಕಾರದ ಲೋಲಕ ಇಳಿಬಿದ್ದಂತೆ ಕೆತ್ತಿದ್ದಾರೆ. ಭುವನೇಶ್ವರಿಯ ಸುತ್ತಲೂ ವರ್ತುಳವಾಗಿ ಪ್ರಾಣಿಗಳ ಮೇಲೆ ಯುದ್ಧಕ್ಕೆ ಹೋಗಲು ಸಿದ್ಧನಾಗಿರುವ ದೃಶ್ಯವನ್ನು ಶಿಲ್ಪಿಯು ಸುಂದರವಾಗಿ ಶಿಲ್ಪಿಸಿದ್ದಾನೆ. ಇವು ಅಷ್ಟದಿಕ್ಪಾಲಕರಂತೆ ತೋರುತ್ತಿದ್ದು ದಿಕ್ಪಾಲಕರ ಪತ್ನಿ ಸಮೇತರಾಗಿ ತಮ್ಮ ವಾಹನದ ಮೇಲೆ ಹೋಗುವ ದೃಶ್ಯವಿದೆ.

ಈ ದೇವಾಲಯದ ಅಧಿಷ್ಠಾನವು ಗರ್ಭಗೃಹ ನವರಂಗದವರೆಗೆ ಸುತ್ತುವರೆದಿದ್ದು ಅದರ ಭಿತ್ತಿಯ ಅರ್ಧಭಾಗವು ನಾಶವಾಗಿದೆ. ಈ ದೇವಾಲಯದ ಅಧಿಷ್ಠಾನವು ಉಪಾನ, ಜಗತಿ, ಕಂಪ, ಕಂಠ ಮತ್ತು ಪಟ್ಟಿಕೆಗಳು ಮೇಲಿನ ಭಾಗವನ್ನು ಶಿಲುಬೆಯಾಕಾರದಲ್ಲಿ ಅಲಂಕರಿಸಿರುವದನ್ನು ಕಾಣಬಹುದು.

ಒಟ್ಟಿನಲ್ಲಿ ಅಮೃತಲಿಂಗೇಶ್ವರ ದೇವಾಲಯವು ಕಲ್ಯಾಣ ಚಾಲುಕ್ಯರ ಕಾಲಾವಧಿಯಲ್ಲಿ ಕಟ್ಟಲ್ಪಟ್ಟಂತೆ ಕಂಡುಬರುತ್ತದೆ. ಈ ದೇವಾಲಯದ ಶಿಲಾಸ್ಥಂಭಗಳು ಪಟ್ಟಿಕೆಗಳಿಂದ ಕೂಡಿರುವ ದ್ವಾರಶಾಖೆಗಳು ದ್ವಾರದ ಮೇಲಿನ ತೋರಣ ಹಾಗೂ ಜಾಲಂದ್ರಗಳನ್ನು ಈ ದೇವಾಲಯ ಹೊಂದಿದೆ. ದೇವಾಲಯದ ಮುಖ ಮಂಟಪ ಹಾಗೂ ಮುಂದಿನ ಅಂಗಳವು ವಿಶಾಲವಾಗಿದ್ದು ಇತ್ತೀಚೆಗೆ ಜೀರ್ಣೋದ್ದಾರವಾಗಿದೆ. ಆದರೆ ಈ ದೇವಾಲಯದ ನಿರ್ಮಾಣ ಹಾಗೂ ನಿರ್ಮಾತೃಗಳ ಬಗ್ಗೆ, ಇಲ್ಲಿಯವರೆಗೆ ನಮಗೆ ಯಾವುದೇ ಶಾಸನಾಧಾರಗಳು ಲಭ್ಯವಿಲ್ಲ.

ಬ) ಸಿದ್ಧೇಶ್ವರ ದೇವಾಲಯ (ಏಕಕೂಟ)

ಅಥಣಿ ನಗರದ ಪೂರ್ವ ದಿಕ್ಕಿನಲ್ಲಿ ಮಧ್ಯಕಾಲೀನ ಇಸ್ಲಾಮಿಕ್ ಶೈಲಿಯ ಸಿದ್ಧೇಶ್ವರ ದೇವಾಲಯವಿದೆ.[ಚಿತ್ರ ಸಂ.೭] ಈ ದೇವಾಲಯದ ಸುತ್ತಲೂ ಪ್ರಾಕಾರ ಹಾಗೂ ಪ್ರಾಕಾರಕ್ಕೆ ಮಹಾದ್ವಾರವಿದೆ. ದೇವಾಲಯದ ತಲವಿನ್ಯಾಸದಲ್ಲಿ ಗರ್ಭಗೃಹ , ತೆರೆದ ಅಂತರಾಳ, ನವರಂಗ ಹಾಗೂ ಮುಕಮಂಟಪವಿದೆ. ಈ ದೇವಾಲಯದ ಅಧಿಷ್ಠಾನ ಹಾಗೂ ಭಿತ್ತಿಗಳು ಅಲಂಕಾರಿಕವಾಗಿವೆ. ಗೋಡೆಗಳು ಸರಳವಾಗಿದ್ದು ಹೊರಗೋಡೆಯ ಮೇಲೆ ಸುಣ್ಣ ಲೇಪನ ಮಾಡಿದ್ದಾರೆ. ಇದಲ್ಲದೆ ಅಥಣಿ ಪಟ್ಟಣದ ಹೊರ ವಲಯದ ಪೂರ್ವ ದಿಕ್ಕಿನಲ್ಲಿ ಪುರಾತನೇಶ್ವರ ದೇವಾಲಯ ಉತ್ತರಕ್ಕೆ ಮುಖ ಮಾಡಿ ನಿರ್ಮಿಸಲ್ಪಟ್ಟಿದೆ.[ಚಿತ್ರ ಸಂ.೨]

೩) ಶೇಡಬಾಳ

ಶೇಡಬಾಳ ಗ್ರಾಮವು ಅಥಣಿಯಿಂದ ಪಶ್ಚಿಮಕ್ಕೆ ೨೭ ಕಿ.ಮೀ ಅಂತರದಲ್ಲಿದೆ. ಈ ಗ್ರಾಮದಲ್ಲಿ ಪ್ರಾಚೀನ ಕಾಲದ ಬಸವಣ್ಣ, ಮಲ್ಲಿಕಾರ್ಜುನ ಹಾಗೂ ಜೈನ ಬಸದಿಗಳಿವೆ.

ಅ) ಬಸವಣ್ಣ ದೇವಾಲಯ (ತ್ರಿಕೂಟ)

ಬಸವಣ್ಣ ದೇವಾಲಯವು ಏಕಕೂಟ ಮಾದರಿಯ ತಲವಿನ್ಯಾಸ ಪಡೆದಿದ್ದು, ಗರ್ಭಗೃಹ ತೆರೆದ ಅಂತರಾಳ, ನವರಂಗ ಹಾಗೂ ಮುಖಮಂಟಪವನ್ನು ಹೊಂದಿದೆ. ಈ ದೇವಾಲಯದ ಸುತ್ತಲೂ ಪ್ರಕಾರವಿದೆ. ಪ್ರಾಕಾರದ ಪ್ರವೇಶದ್ವಾರವು ಪೂರ್ವಾಭಿಮುಖವಾಗಿದೆ. ಹಾಗಿಯೇ ದೇವಾಲಯದ ನವರಂಗದ ಉತ್ತರ ದಿಕ್ಕಿನ ಗೋಡೆಯ ಮದ್ಯದಲ್ಲಿಯೂ ಒಂದು ಚಿಕ್ಕದಾದ ಪ್ರವೇಶದ್ವಾರವಿದೆ. ಆದರೆ ಸದ್ಯಕ್ಕೆ ಪ್ರವೇಶದ್ವಾರವನ್ನು ಮುಚ್ಚಿದ್ದಾರೆ. ಈ ದೇವಾಲಯದ ಸುತ್ತಲೂ ಪ್ರಾಕಾರವಿದೆ. ಈ ದೇವಾಲಯದ ಶೈಲಿಯಿಂದ ಕಂಬ ಇತ್ಯಾದಿಗಳು ಸುಮಾರು ಕ್ರಿ.ಶ ೧೨ ನೇ ಶತಮಾನದವೆಂದು ಮತ್ತು ಉಳಿದ ಭಾಗಗಳು ೨೦ ನೇ ಶತಮಾನದವೆಂದು ತರ್ಕಿಸಬಹುದು.

ಈ ದೇವಾಲಯದ ನಿರ್ಮಾಣ ಕಾಲ ಹಾಗೂ ನಿರ್ಮಾತೃದ ಬಗೆಗೆ ನಿರ್ಧಿಷ್ಟವಾಗಿ ತಿಳಿಸುವ ಯಾವುದೇ ಆಧಾರಗಳಿಲ್ಲ. ಆದರೂ ಕ್ರಿ.ಶ. ೧೧೫೩ ರಲ್ಲಿ ರಚನೆಗೊಂಡ ಶಿಲಾಹಾರ ದೊರೆ ವಿಜಾಯಾದಿತ್ಯನ ಕಾಲದ ಶಾಸನ (ಅಣ್ಣಾರಾಯ ಮಿರ್ಜೆ ೧೯೬೬ ಶೇಡಬಾಳ ಶತಮಾನ, ''ಶೇಡಬಾಳ ಬಸವೇಶ್ವರ ದೇವಾಲಯದಲ್ಲಿರುವ (ಶಿಲಾಹಾರ ವಿಜಯಾದಿತ್ಯನ) ಶಿಲಾಶಾಸನ'' (ಪು. ೧೬೦-೧೬೧) ಉಪಲಬ್ದವಾಗಿರುವದರಿಂದ ಇದೇ ಕಾಲಾವಧಿಯಲ್ಲಿ ಬಸವಣ್ಣ ದೇವಾಲಯ ಪ್ರವರ್ಧಮಾನವಾಗಿರಬೇಕು.

ಬಸವಣ್ಣ ದೇವಾಲಯದ ಗರ್ಭಗೃಹವು ಚೌಕಾಕಾರ ಹೊಂದಿದ್ದು ೩.೧೫ ಮೀ ವಿಸ್ತೀರ್ಣ ಹೊಂದಿದೆ. ಈ ಅರ್ಧ ಕಂಬಗಳು ನಾಲ್ಕು ಮೂಲೆಗಳಲ್ಲಿವೆ. ಹಾಗೆಯೇ ಮೂರು ಕಂಬಗಳು ಗೋಡೆಗಳ ಮಧ್ಯದಲ್ಲಿವೆ. ಗರ್ಭಗೃಹದ ಮಧ್ಯದಲ್ಲಿ ಕಪ್ಪು ಕಲ್ಲಿನಲ್ಲಿ ನಿರ್ಮಾಣಗೊಂಡ ಶಿವಲಿಂಗವಿದೆ. ಲಿಂಗದ ಜಲಧಾರೆಯು ಉತ್ತರ ದಿಕ್ಕಿನ ಕಡೆಗೆ ಚಾಚಿದೆ. ಗರ್ಭಗೃಹದ ಗೋಡೆಗಳು ಸರಳವಾಗಿದ್ದು, ನಿರಾಲಂಕಾರವಾಗಿವೆ.

ಈ ದೇವಾಲಯದ ನವರಂಗವೂ ಕೂಡ ಚತುರಸ್ರಾಕಾರ ಹೊಂದಿದ್ದು ೪.೩೨ ಮೀ ವಿಸ್ತಾರ ಹೊಂದಿದೆ. ಇದರಲ್ಲಿ ಒಟ್ಟು ಹದಿನಾರು ಕಂಬಗಳಿದ್ದು ಅವುಗಳಲ್ಲಿ ನಾಲ್ಕು ಮಧ್ಯದ ಪೂರ್ಣ ಸ್ತಂಭಗಳಾಗಿಯೂ ಉಳಿದವೂ ಗೋಡೆಯ ಹಾಗೂ ಮೂಲೆಗಳ ಅರ್ಧಗಂಬಗಳಾಗಿ ಭಾವಣಿಯನ್ನು ಹೊತ್ತಿವೆ. ನವರಂಗದ ಮಧ್ಯದ ನಾಲ್ಕು ಪೂರ್ಣ ಕಂಬಗಳ ನಡುವೆ ಚೌಕಾಕೃತಿಯ ನಂದಿ ಪೀಠವಿದೆ. ಇದರ ಮೇಲೆ ಮೂರು ನಂದಿ ಮೂರ್ತಿಗಳು ಗರ್ಭಗೃಹದಲ್ಲಿಯ ಲಿಂಗಕ್ಕೆ ಎದುರು ಮುಖಮಾಡಿ ಕುಳಿತಿವೆ. ನಂದಿ ಮಂಟಪವು ೨ ಮೀ ಸುತ್ತಳತೆ ಹೊಂದಿದೆ.

ಗರ್ಭಗೃಹ ದ್ವಾರವು ಚಿಕ್ಕದಾಗಿದ್ದು ೦.೨೬ ಮೀ ಅಗಲ ಹಾಗೂ ೧.೦೨ ಮೀ ಉದ್ದವಿರುವ ಪ್ರವೇಶವನ್ನು ಹೊಂದಿದೆ. ದ್ವಾರ ಶಾಖೆಗಳಲ್ಲಿ ಅರ್ಧಗಂಬಗಳ ಕೆತ್ತನೆಯಿದೆ. ಇದರ ಲಲಾಟ ಬಿಂಬದಲ್ಲಿ ಚಿಕ್ಕ ಗಾತ್ರದ ಗಣಪತಿಯ ಉಬ್ಬುಶಿಲ್ಪವಿದೆ.

ಈ ದೇವಾಲಯದ ಗರ್ಭಗೃಹ ಹಾಗೂ ನವರಂಗದ ಛಾವಣಿಗಳ ಮೇಲೆ ಎರಡು ಕದಂಬನಾಗರ ಶಿಖರಗಳಿದ್ದು, ಗರ್ಭಗೃಹದ ಮೇಲಿರುವ ಶಿಖರವು ಗಾತ್ರದಲ್ಲಿ ದೊಡ್ಡದಾಗಿದೆ. ದೇವಾಲಯದ ಪ್ರಕಾರಗೋಡೆಯ ಹೊರ ಆವರಣದಲ್ಲಿ ದೀಪಸ್ತಂಭ ಹಾಗೂ ಚಿಕ್ಕ ಮಂಟಪವಿದೆ. ಪ್ರಕಾರ ಗೋಡೆಯಲ್ಲಿ ಎರಡು ದ್ವಾರಗಳಿವೆ. ದೇವಾಲಯವನ್ನು ನೇರವಾಗಿ ಪ್ರವೇಶಿಸುತ್ತಿದ್ದಂತೆ ಒಂದು ದ್ವಾರವು ಪೂರ್ವದಲ್ಲಿದ್ದು, ಅದರ ಮೇಲೆ ದ್ವಾರಮಂಟಪ ಹಾಗೂ ಅದರ ಮೇಲೆ ಆಯತಾಕಾರದ ಕಮಾನವಿದೆ. ಇನ್ನೊಂದು ಚಿಕ್ಕದ್ವಾರವು ಪ್ರಾಕಾರದ ದಕ್ಷಿಣಕ್ಕಿದೆ. ಪ್ರಕಾರಗೋಡೆಯ ಒಳ ಆವರಣದಲ್ಲಿ ಅನೇಕ ಚಿಕ್ಕಗುಡಿಗಳಿವೆ. ಹಾಗೆಯೇ ಗರ್ಭಗೃಹದ ಹಿಂಬದಿಯಲ್ಲಿ ಒಂದು ಚೌಕಾಕಾರದ ಬಾವಿ ಇದೆ.

ಒಟ್ಟಿನಲ್ಲಿ ಶಿಲಾಹಾರ ಅರಸರ ಕಾಲದ ಭವ್ಯವಾಗಿ, ಸುಂದರವಾಗಿ ಸುಸ್ಥಿತಿಯಲ್ಲಿರುವ ಪ್ರಮುಖ ದೇವಾಲಯವಾಗಿದೆ. ಇಂದಿಗೂ ಇದರ ಪೂಜೆ ನಡೆಯುತ್ತಿದ್ದು, ಇದು ಗ್ರಾಮದ ಪ್ರಮುಖ ದೇವಾಲಯವಾಗಿದೆ. ಪ್ರತಿ ವರುಷ ಮಹಾಶಿವರಾತ್ರಿಯ ಸಮಯಕ್ಕೆ ಜಾತ್ರೆ ನಡೆಯುತ್ತಿದೆ. ಅಂದು ದೇವಾಲಯದ ಎದುರಿಗಿರುವ ಸುಮಾರು ೧೫ ಮೀ ಎತ್ತರವಾದ ದೀಪಸ್ತಂಭದ ಮೇಲೆ ಜ್ಯೋತಿಯ ಉರಿಸುತ್ತಾರೆ. ಈ ಜ್ಯೋತಿ ಉರಿಯುವ ಒಂದು ವೈಶಿಷ್ಟವೆಂದರೆ, ಜ್ಯೋತಿಯ ಕಿರಣಗಳು ನೇರವಾಗಿ ಪ್ರಕಾರ ದ್ವಾರದ ಕಮಾನಿನಲ್ಲಿ ಹಾಯ್ದು ನೇರವಾಗಿ ನವರಂಗ ಮಂಟಪದಲ್ಲಿರುವ ನಂದಿಯ ಭುಜದ ಮೇಲೆ ಬೀಳುತ್ತದೆ.

ಇದೇ ಗ್ರಾಮದ ಹೊರ ಭಾಗದ ಪೂರ್ವ ದಿಕ್ಕಿನಲ್ಲಿ ಶಿಲಾಹಾರ ಅರಸರ ಕಾಲದ ಮಲ್ಲಿಕಾರ್ಜುನ ದೇವಾಲಯ ಕಂಡುಬರುತ್ತದೆ.

೪) ಬಳ್ಳಿಗೇರಿ

ಬಳ್ಳಿಗೇರಿಯು ಅಥಣಿಯಿಂದ ಉತ್ತರಕ್ಕೆ ೧೮ ಕಿ.ಮೀ. ಅಂತರದಲ್ಲಿದೆ. ಪ್ರಾಚೀನ ಶಾಸನಗಳಲ್ಲಿ ಈ ಗ್ರಾಮವನ್ನು ''ಬಾಳಿಂಗೇರಿ'' ಎಂಬ ಉಲ್ಲೇಖವಿದೆ ಇಲ್ಲಿ ಪ್ರಾಚೀನ ಶೈಲಿಯ ದೇವಾಲಯಗಳನ್ನು ಕಾಣಬಹುದು.

ಅ) ಬಸವಣ್ಣ ದೇವಾಲಯ (ತ್ರಿಕೂಟಾಚಲ ) :

ಈ ದೇವಾಲಯವು ಬಳ್ಳಿಗೇರಿಯಿಂದ ಪೂರ್ವಕ್ಕೆ ಎತ್ತರವಾದ ದಿಬ್ಬದ ಮೇಲಿದೆ. ತ್ರಿಕೂಟಾಚಲವಾದ ತಲವಿನ್ಯಾಸವನ್ನು ಹೊಂದಿದೆ.[ಚಿತ್ರ ಸಂ.೧೨] ಮೂರು ಗರ್ಭ ಗೃಹ ಮೂರು ಅರ್ಧಮಂಟಪ ಅಂತರಾಳ ವಿಶಾಲವಾದ ಚತುಸ್ರಾಕಾರದ ನವರಂಗವನ್ನು ಹೊಂದಿದೆ. ಗರ್ಭಗೃಹದ ಲಲಾಟದಲ್ಲಿ ಲಕ್ಷ್ಮಿ, ನರಸಿಂಹರ ಉಬ್ಬು ಶಿಲ್ಪವಿದೆ. ದ್ವಾರದ ಬಲಗೋಡೆಯ ಒಳಭಾಗದಲ್ಲಿ ಹಾಗೂ ಕಲ್ಯಾಣ ಚಾಲುಕ್ಯರ ಎರಡು ಶಾಸನಗಳಿವೆ.[ಚಿತ್ರ ಸಂ.೧೩]

ಮೂರನೆಯ ಶಾಸನ

ಕಲ್ಯಾಣ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಎರಡು ಶಾಸನಗಳು ದೊರೆತಿವೆ. ಚಾಲುಕ್ಯ ವಂಶದ ಕೆಲವು ಹೆಸರುಗಳಿವೆ. ಈ ದೇವಾಲಯವನ್ನು ಉಬದಾನಿಯ ನರಸಿಂಹ ದೇವಾಲಯವೆಂದು ಉಲ್ಲೇಖಿಸಿದೆ. ಅದು ಕಲ್ಯಾಣ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಕಾಲದಾಗಿದ್ದು ಅದರಲ್ಲಿ ಕಲಚೂರಿ ಇಮ್ಮಡಿ ಬಿಜ್ಜಳ ಅವನ ಸಹೋದರರಾದ ಮೈಲುಗಿ ಮತ್ತು ಹೆಮ್ಮಾಡಿಯರ ವಿವರಗಳಿವೆ.

ಎರಡನೆಯ ಶಾಸನ ಇದರ ಕಾಲ ಕ್ರಿ.ಶ. ೧೧೫೬ ಪಾರ್ಶ್ವನಾಥ ತೀರ್ಥಂಕರನ ಪೂಜೆಪುನಸ್ಕಾರಕ್ಕಾಗಿ ದತ್ತಿ ನೀಡಿದ ವಿವರವಿದೆ. ಈ ದೇವಾಲಯದಲ್ಲಿ ಈ ಶಾಸನಕ್ಕೆ ಸಂಬಂಧಿಸಿದ ಜೈನ ಚಿತ್ರ - ವಿಗ್ರಹಗಳಿರುವದಿಲ್ಲ. ಆದ್ದರಿಂದ ಈ ಶಾಸನವನ್ನು ಬೇರೆಕಡೆಯಿಂದ ತಂದಿರುವ ಸಾಧ್ಯತೆ ಇದೆ.

ವೀರಭದ್ರೇಶ್ವರ ದೇವಾಲಯ

ಈ ದೇವಾಲಯವು ಬಸವಣ್ಣ ದೇವಾಲಯದ ಮುಂದುಗಡೆ ತಗ್ಗಾದ ಪ್ರದೇಶದಲ್ಲಿ ನಿರ್ಮಿತವಾಗಿದೆ. ಈ ದೇವಾಲಯವು ತ್ರಿಕೂಟಾಚಲವಾಗಿದೆ. (ಚಿತ್ರ ಸಂ.೮) ಮೂರು ಗರ್ಭಗೃಹ ನವರಂಗ, ಅರ್ಧಮಂಟಪ ಹಾಗೂ ಮುಖ ಮಂಟಪವನ್ನು ಹೊಂದಿರುತ್ತದೆ. ಇದು ಕಲ್ಯಾಣ ಚಾಲುಕ್ಯರ ಶೈಲಿಯನ್ನು ಹೊಂದಿರುತ್ತದೆ. ಇದು ಪೂರ್ತಿಯಾಗಿ ನಾಶವಾಗುವ ಹಂತದಲ್ಲಿದೆ.

ಈ ದೇವಾಲಯವು ತ್ರಿಕೂಟಾಚಲವಾಗಿದೆ. ಗರ್ಭಗೃಹದಲ್ಲಿ ಭಗ್ನಗೊಂಡಿರುವ ವೀರಭದ್ರನ ವಿಗ್ರಹವಿದ್ದು, ಮರಳು ಮಿಶ್ರಿತ ಕಲ್ಲಿನಲ್ಲಿ ಕೆತ್ತಲ್ಪಟ್ಟಿದೆ. ಗರ್ಭಗೃಹದ ನಾಲ್ಕು ಮೂಲೆಗಳಲ್ಲಿ ಚಾಲುಕ್ಯ ಶೈಲಿಯ ಕೆತ್ತನೆಯಿಂದ ಕೂಡಿದ ಕಂಬಗಳನ್ನು ಕಾಣಬಹುದು. ಪಾರ್ಶ್ವದ ಗರ್ಭಗೃಹಗಳೆರಡರಲ್ಲಿ ಯಾವುದೇ ವಿಗ್ರಹಗಳು ಕಂಡು ಬರುವುದಿಲ್ಲ. ಎಡಬದಿಗೆ ಇರುವ ಗರ್ಭಗೃಹದಲ್ಲಿ ಒಂದು ಹಾಳು ಬಾವಿ ಇದೆ ಪ್ರತೀತಿ ಇದೆ.

ಈ ದೇವಾಲಯ ೩ ಗರ್ಭಗೃಹಗಳಿಗೆ ಹೊಂದಿಕೊಂಡಂತೆ ಒಂದು ವಿಶಾಲವಾದ ನವರಂಗವಿದೆ. ಈ ನವರಂಗದಲ್ಲಿ ಸುಂದರವಾಗಿ ಕೆತ್ತಲ್ಪಟ್ಟ ೩೦ ಕಂಬಗಳಿವೆ. ೪ ಕಂಬಗಳು ಮಧ್ಯದಲ್ಲಿದ್ದು ಪೂರ್ಣಕಂಬಗಳಾಗಿ ಮೇಲ್ಛಾವಣಿಯನ್ನು ಹೊತ್ತುಕೊಂಡು ನಿಂತಿವೆ. ಇನ್ನುಳಿದ ೧೬ ಕಂಬಗಳು ಗೋಡೆಯಲ್ಲಿದ್ದು ಅರ್ಧಕಂಬಗಳಾಗಿವೆ. ನವರಂಗವು ವಿಶಾಲವಾಗಿದ್ದು ಪ್ರವೇಶ ದ್ವಾರವನ್ನು ಹೊಂದಿದೆ.

ಮುಖಮಂಟಪವು ನವರಂಗಕ್ಕೆ ಹೊಂದಿಕೊಂಡ ನಿರ್ಮಿತವಾಗಿರುತ್ತದೆ. ನವರಂಗಕ್ಕಿಂತ ಕಡಿಮೆ ಸ್ಥಳಾವಕಾಶವನ್ನು ಹೊಂದಿರುತ್ತದೆ. ಮುಖಮಂಟಪವು ತಗ್ಗಿನಲ್ಲಿದ್ದು ಕೆತ್ತನೆಯಿಂದ ಕೂಡಿರುತ್ತದೆ. ಮುಖಮಂಟಪದ ಒಳಗೆ ನವರಂಗದ ಗೋಡೆಯ ಕಲ್ಲಿನಲ್ಲಿ ಸಪ್ತ ಮಾತೃಕೆಯರ ಶಿಲ್ಪವಿದೆ. ಅವರ ವಾಹನಗಳನ್ನು ಚಿತ್ರಿಸಲಾಗಿದೆ.

ಮೊದಲನೆಯ ವಿಗ್ರಹ ಇಲಿಯ ಮೇಲೆ ಕುಳಿತ ಚಿತ್ರವಿದೆ. ಗಣಪತಿಯ ವಿಗ್ರಹವಾಗಿದೆ. ಎರಡನೆಯ ವಿಗ್ರಹದಲ್ಲಿ ಕುಳಿತುಕೊಂಡಿರುವ ಸ್ತ್ರೀ ಅವಳ ಕೈಯಲ್ಲಿ ಒಂದು ಡಮರು ಅವಳಿಗೆ ನಾಲ್ಕು

ಕೈಗಳಿವೆ. ತಲೆಯ ಮೇಲೆ ಕಿರೀಟವಿದೆ. ಇವಳ ವಾಹನ ನಾಯಿ. ಮೂರನೆಯದು ಕುಳಿತುಕೊಂಡ ಸ್ತ್ರೀ ಅವಳ ವಾಹನ ಆನೆ ಅವಳ ಕೈಯಲ್ಲಿ ಯಾವುದೇ ಆಯುಧವಿರುವದಿಲ್ಲ.

ನಾಲ್ಕನೆಯ ವಿಗ್ರಹ ಕುಳಿತ ಸ್ತ್ರೀ ಅವಳ ವಾಹನ ನರಿ ಅವಳ ಕೈಯಲ್ಲಿರುವ ವಾಹನಗಳೂ ಸರಿಯಾಗಿ ಕಾಣುವದಿಲ್ಲ. ಐದನೆಯ ವಿಗ್ರಹ ಕುಳಿತ ಸ್ತ್ರೀ ಅವಳ ಮುಂದೆ ಒಬ್ಬ ಯೋಧ ಕುಳಿತುಕೊಂಡಿದ್ದಾನೆ. ಆರನೆಯ ವಿಗ್ರಹ ಸ್ತ್ರೀಯು ಕುಳಿತ ಭಂಗಿಯಲ್ಲಿದ್ದಾಳೆ. ಇವಳು ಕೈಯಲ್ಲಿ ಪುಸ್ತಕ ಮತ್ತು ವೀಣೆಯನ್ನು ಹಿಡಿದುಕೊಂಡಿದ್ದಾಳೆ. ಇವಳ ವಾಹನ ನವಿಲು ಇದರಿಂದ ಇವಳು ಸರಸ್ವತಿ ಎಂದು ಗುರುತಿಸಬಹುದು. ಏಳನೆಯ ವಿಗ್ರಹ ಬಸವಣ್ಣನ ಚಿತ್ರವಿದ್ದು ಕೈಯಲ್ಲಿ ಡಮರು, ಈಶ್ವರ ಲಿಂಗವಿದೆ. ಎಂಟನೆಯ ವಿಗ್ರಹ ಕುಳಿತ ಸ್ತ್ರೀ ಮುಂದೆ ಬಾತಗೋಳಿಯ ಚಿತ್ರವಿದೆ. ಯಾವುದೇ ಆಯುಧಗಳು ಕಂಡು ಬಂದಿಲ್ಲ. ಒಂಬತ್ತನೆಯ ವಿಗ್ರಹ ಕುಳಿತ ಸ್ತ್ರೀ ಮುಂದೆ ಎರಡು ಕೈಯಲ್ಲಿ ವೀಣೆ ಇರುತ್ತದೆ.

೪) ಸತ್ತಿ

ಈ ಗ್ರಾಮವು ಅಥಣಿಯಿಂದ ದಕ್ಷಿಣಕ್ಕೆ ೧೭ ಕಿ.ಮೀ. ಅಂತರದಲ್ಲಿದೆ. ಹಾಗೂ ಕೃಷ್ಣಾ ನದಿಯ ಎಡದಂಡೆಯ ಮೇಲಿದೆ. ಇದು ಪುರಾತನ ಐತಿಹಾಸಿಕ ಸ್ಥಳವಾಗಿದೆ. ಇಲ್ಲಿ ಪುರಾತನ ಕಾಲದ ಏಳು ದೇವಾಲಯಗಳಿವೆ. ಈಗ ನಮಗೆ ಐದು ದೇವಾಲಯಗಳು ನೋಡಲು ಸಿಗುತ್ತವೆ. ಎರಡು ದೇವಾಲಯಗಳು ನಾಶವಾಗಿವೆ.

ಅ) ಬದರಿ ನಾರಾಯಣ (ಲಕ್ಷ್ಮೀ ನರಸಿಂಹ) ದೇವಾಲಯ

ಈ ದೇವಾಲಯವು ಗ್ರಾಮದ ಮಧ್ಯದಲ್ಲಿದ್ದು ತ್ರಿಕೂಟಾಚಲವಾಗಿದೆ. ದಕ್ಷಿಣ ದಿಕ್ಕಿಗೆ ಪ್ರವೇಶ ದ್ವಾರವನ್ನು ಹೊಂದಿದೆ.

ದೇವಾಲಯವು ಪ್ರಾಚೀನ ಕಾಲದಲ್ಲಿ ನಿರ್ಮಾಣಗೊಂಡಿದ್ದು, ಅಥಣಿ ತಾಲೂಕಿನ ''ಮುರಗುಂಡಿ'' ಗ್ರಾಮದ ತಾಮ್ರಪಟ ಶಾಸನದಲ್ಲಿ (ಕಾಮತ.ಯು. ಸೂರ್ಯನಾಥ, ೧೯೮೭ , ಬೆಳಗಾಂ ಡಿಸ್ಟ್ರಿಕ್ಟ ಗ್ಯಾಜೆಟಿಯರ್, ಪ್ರ ೩೯೬) (ಕ್ರಿ.ಶ. ೧೧೮೩) ಸತ್ತಿ ಮಹಾ ಅಗ್ರಹಾರದ ನರಸಿಂಹ ದೇವಾಲಯಕ್ಕೆ ಕಲ್ಯಾಣ ಚಾಲುಕ್ಯ ದಂಡಾಧಿಕಾರಿಯಾಗಿದ್ದ ಸೋಮಚಾಮುಪತಿ ಎಂಬುವನು, ಹಲವು ದಾನಗಳನ್ನು (ಉಂಬಳಿ) ನೀಡಿದ ಬಗ್ಗೆ ಉಲ್ಲೇಖವಿದೆ.[೮] ಇದರಿಂದಾಗಿ, ಇಂದು ಸ್ಥಳೀಯವಾಗಿ ಕರೆಯುವ ಈ ಬದರಿನಾರಾಯಣ ದೇವಾಲಯವು ಕಲ್ಯಾಣದ ಚಾಲುಕ್ಯ ಅರಸರ ಆಳ್ವಿಕೆಯವಧಿಯಲ್ಲಿ ಲಕ್ಷ್ಮಿನರಸಿಂಹ ದೇವಾಲಯವೆಂದು ತಿಳಿದು ಬರುತ್ತದೆ.

ತ್ರಿಕೂಟ ಮಾದರಿಯ ತಲವಿನ್ಯಾಸ ಹೊಂದಿದ ಈ ಲಕ್ಷ್ಮೀ ನರಸಿಂಹನ ದೇವಾಲಯವು ಮೂರು ಗರ್ಭಗೃಹಗಳು ಗಾತ್ರದಲ್ಲಿ ಸಮನಾಗಿವೆ. ಈ ಮೂರು ಗರ್ಭಗೃಹಗಳು ಗಾತ್ರದಲ್ಲಿ ಸಮನಾಗಿವೆ. ಹಾಗೆಯೇ ಇವುಗಳಿಗೆ ಹೊಂದಿಕೊಂಡು ಮೂರು ಅರ್ಧಮಂಟಪಗಳಿದ್ದು ಇವು ಕೂಡ ಒಂದೊಕ್ಕೊಂದು ಸಮನಾಗಿವೆ. ಹಾಗೂ ಗರ್ಭಗೃಹಗಳಷ್ಟೇ ವಿಸ್ತೀರ್ಣವನ್ನು ಹೊಂದಿವೆ. ಇವುಗಳಿಗೆ ಹೊಂದಿಕೊಂಡು ಚತುಸ್ರಾಕಾರದ ವಿಶಾಲವಾದ ನವರಂಗವಿದೆ. ನವರಂಗದ ಪ್ರವೇಶದ್ವಾರದ ಎರಡು ಬಾಜುವಿಗೆ ಜಾಲಾಂದ್ರಗಳನ್ನು

ಅಳವಡಿಸಿದ್ದಾರೆ. ಮತ್ತು ನವರಂಗದ ಪ್ರವೇಶದ್ವಾರ ಲಲಾಟ ಬಿಂಬದಲ್ಲಿ ಲಕ್ಷ್ಮೀ ನರಸಿಂಹನ ಉಬ್ಬು ಶಿಲ್ಪವಿದೆ. ಇದರಿಂದಾಗಿ, ಇದನ್ನು ಮೂಲತ: ವೈಷ್ಣವ ದೇವಾಲಯವೆನ್ನುವದರಲ್ಲಿ ಸಂದೇಹವಿಲ್ಲ.

ಇಂದು ರೂಢಿಯಲ್ಲಿರುವ ಬದರಿನಾರಾಯಣ ದೇವಾಲಯವು ಮೂರು ಗರ್ಭಗೃಹಗಳನ್ನು ಹೊಂದಿದ್ದು, ಈ ಮೂರು ಗರ್ಭಗೃಹಗಳಲ್ಲಿ ಕಿಟಕಿ ಜಾಲಾಂಧ್ರಗಳಿರದೆ, ಕತ್ತಲೆಯಿಂದ ಕೂಡಿದೆ ಇವು ಒಂದೊಕ್ಕೊಂದು ಸಮವಾಗಿದ್ದು ೨.೦೮ ಮೀ ಉದ್ದಗಲವನ್ನು ಹೊಂದಿದ್ದು ಹಾಗೆ ಒಂದಕ್ಕೊಂದು ಎದುರು ಮುಖಮಾಡಿ, ಉತ್ತರ ಹಾಗೂ ಪೂರ್ವ -ಪಶ್ಚಿಮ ದಿಕ್ಕುಗಳಿವೆ. ಇವುಗಳ ಗೋಡೆಗಳ ಮಧ್ಯಭಾಗದಲ್ಲಿ ಎರಡೆರಡು ಮುಂದೆ ಬಂದ ಭಾಗ (ಜಗುಲಿ ಅಥವಾ ನಾಗವಂದಿಸಿ) ಹಾಗೂ ಮೂಲೆಕಂಬಗಳಿವೆ. ಇವುಗಳ ಮೇಲಿನ ಛಾವಣಿಗಳಲ್ಲಿ ಅಲಂಕೃತವಾದ ಭುವನೇಶ್ವರಿಗಳನ್ನು ಕಂಡರಿಸಿದ್ದಾರೆ. ಆದರೆ ಪೂರ್ವ ದಿಕ್ಕಿಗಿರುವ ಗರ್ಭಗೃಹದ ಹಿಂಬದಿಯ ಗೋಡೆಯೂ ಸಹ ನಾಶವಾಗಿದೆ. ಈ ಗರ್ಭಗೃಹದಲ್ಲಿಯ ಸುಂದರ ಅಲಂಕೃತವಾದ ಚತುರ್ಮುಖ ಬ್ರಹ್ಮನ ಶಿಲಾಮೂರ್ತಿಯನ್ನು ಗರ್ಭಗೃಹದ ಮುಂದಿನ ಅಂತರಾಳದ ಗೋಡೆಗೆ ವಾಲಿಸಿಟ್ಟಿರುವದರಿಂದ ಉತ್ತರ ದಿಕ್ಕಿನ ಗರ್ಭಗೃಹವು ಖಾಲಿ ಇದೆ. ಈ ಗರ್ಭಗೃಹದ ಎಡಗಡೆ (ಪೂರ್ವದಿಕ್ಕಿಗೆ) ಇರುವ ಗರ್ಭಗೃಹದಲ್ಲಿ, ವಿಷ್ಣುವಿನ ಒಂದೂವರೆ ಮೀಟರ್ ಎತ್ತರವಾದ ಸೂಕ್ಷ್ಮ ಶಿಲಾಲಂಕಾರದಿಂದೊಡಗೂಡಿದ ಶಿಲಾಮೂರ್ತಿ ಇದ್ದು, ಈ ಮೂರ್ತಿಯನ್ನು ಸಹ ಸಡಿಲವಾಗಿ ಗರ್ಭಗೃಹದ ಹಿಂಬದಿಯ ಒಳಭಾಗದ ಗೋಡೆಗೆ ತಾಗಿಸಿ ನಿಲ್ಲಿಸಿದ್ದಾರೆ. ವಿಷ್ಣು ಮೂರ್ತಿಯ ಪ್ರಭಾವಳಿಯಲ್ಲಿ ದಶಾವತಾರದ ಬಿಂಬಗಳಿವೆ. ಬ್ರಹ್ಮ ಹಾಗೂ ವಿಷ್ಣುವಿನ ಮೂರ್ತಿಗಳೆರಡೂ ಮಧ್ಯಮ ಗಾತ್ರದವುಗಳಾಗಿದ್ದು, ಕಪ್ಪು ವರ್ಣದ ನೀಲಿ ಛಾಯೆಯ ಮೃದುವಾದ ಬಳಪದ ಕಲ್ಲಿನಲ್ಲಿ ನಿರ್ಮಾಣಗೊಂಡಿದೆ. ಪಶ್ಚಿಮಕ್ಕಿರುವ ಗರ್ಭಗೃಹದಲ್ಲಿ ಶಿವಲಿಂಗ ಪ್ರತಿಷ್ಠಾಪಿಸಿದ್ದಾರೆ.

ಈ ದೇವಾಲಯದಲ್ಲಿ ಮೂರು ಗರ್ಭಗೃಹಗಳಿವೆ ಇವುಗಳನ್ನು ಹೊಂದಿಕೊಂಡು ಮೂರು ಅಂತರಾಳ ಪ್ರವೇಶ ದ್ವಾರಗಳನ್ನು ಹೊಂದಿವೆ. ಇವು ಗರ್ಭಗೃಹಗಳಷ್ಟೇ ವ್ಯಾಸವನ್ನು ಹೊಂದಿದ್ದು ಗಾತ್ರದಲ್ಲಿ ಒಂದಕ್ಕೊಂದು ಸಮಾನವಾಗಿದೆ. ಮೂಲೆಗಳಲ್ಲಿ ಸುಂದರವಾಗಿ ಕೆತ್ತಿರುವ ಕಂಬಗಳನ್ನು ಹೊಂದಿರುತ್ತವೆ. ಇವುಗಳ ಮೇಲ್ಛಾವಣಿಯಲ್ಲಿ ಅಲಂಕೃತವಾದ ಭುವನೇಶ್ವರಿಗಳನ್ನು ಕೊರೆದಿದ್ದಾರೆ.

ಈ ದೇವಾಲಯವು ಅತೀ ಸುಂದರವಾಗಿ ಕೆತ್ತಲ್ಪಟ್ಟ ೧೬ ಕಂಬಗಳಿಂದ ನಿರ್ಮಾಣಗೊಂಡಿದ್ದು ನಾಲ್ಕು ಕಂಬಗಳು ನವರಂಗದ ಮಧ್ಯದಲ್ಲಿ ಪೂರ್ಣಕಂಬಗಳಾಗಿದ್ದು ಹನ್ನೆರಡು ಗೋಡೆಕಂಬಗಳಾಗಿರುತ್ತದೆ. ಚೌಕಾಕಾರದ ನವರಂಗವು ಆರು ದೇವಕೋಷ್ಟಕದಲ್ಲಿ ಮಾತ್ರ ಶಿವಪಾರ್ವತಿಯ ಉಬ್ಬು ಶಿಲ್ಪದ ಶಿಲಾಮೂರ್ತಿಯಿದೆ. ಈ ಮೂರ್ತಿಯೂ ನಸುಗೆಂಪು ವರ್ಣದ ಬೆಣಚು ಕಲ್ಲಿನಲ್ಲಿ ನಿರ್ಮಾಣವಾಗಿವೆ. ನವರಂಗದ ಒಳವಿಸ್ತೀರ್ಣವು ೫.೨೩ ಮೀ. ಉದ್ದಗಲವನ್ನು ಹೊಂದಿದೆ.

ಈ ದೇವಾಲಯವು ಮೂರು ಗರ್ಭಗೃಹ ಹಾಗೂ ಮೂರು ಅಂತರಾಳಗಳು ಪ್ರವೇಶ ದ್ವಾರಗಳನ್ನು ಹೊಂದಿದ್ದು, ಇವೆಲ್ಲವು ಒಂದೊಕ್ಕೊಂದು ಸಮಾನ ಗಾತ್ರವನ್ನು ಹೊಂದಿವೆ. ಈ ಎಲ್ಲ ಪ್ರವೇಶ ದ್ವಾರಗಳು ೨.೧೫ ಮೀ ಎತ್ತರ ಹಾಗೂ ೦.೩೩ ಮೀ. ಅಗಲವಾಗಿವೆ. ಆದರೆ ಇವುಗಳ ಅಲಂಕರಣೆ ಮಾತ್ರ ಭಿನ್ನ ಭಿನ್ನವಾಗಿವೆ. ಪಶ್ಚಿಮಕ್ಕಿರುವ ಅರ್ಧಮಂಟಪಗಳ ಪ್ರವೇಶದ್ವಾರಗಳೆರಡೂ ದ್ವಾರಪಾಲಕರನ್ನು ಕಂಡರಿಸಿದ್ದಾರೆ.

ಪೂರ್ವ ಹಾಗೂ ಉತ್ತರಕ್ಕಿರುವ ದ್ವಾರಗಳು ಯಾವುದೇ ದ್ವಾರಪಾಲಕರನ್ನು ಹೊಂದಿರುವದಿಲ್ಲ. ಈ ದ್ವಾರಗಳೆಲ್ಲವು ಅಗಲವಾದ ಕೂಡಿದ ದ್ವಾರ ಶಾಖೆಗಳನ್ನು ಅರ್ಧ ಕಂಬಗಳ ಕೆತ್ತನೆಗಳನ್ನು ಹಾಗೂ ತೋರಣಗಳಿಂದ ಅಲಂಕೃತವಾಗಿವೆ. ಮೇಲ್ಭಾಗದಲ್ಲಿ ಮಂಜೂರುನಂತೆ ಮುಂದೆ ಬಂದ ದ್ರಾವಿಡ ಮಾದರಿಯ ಶಿಖರಗಳ ಕೆತ್ತನೆಗಳಿವೆ. ಅರ್ಧಮಂಟಪಗಳ ದ್ವಾರಗಳ ಎರಡೂ ಕಡೆಗೆ ಜಾಲಾಂಧ್ರಗಳನ್ನು ಅಳವಡಿಸಿದ್ದಾರೆ.

ಈ ದೇವಾಲಯದಲ್ಲಿರುವ ಪ್ರತಿಯೊಂದು ಕಂಬವು ಚೌಕಾಕಾರದ ಪೀಠಗಳನ್ನು ಹೊಂದಿವೆ. ಇವು ೧.೦೮ ಮೀ. ಎತ್ತರ ಹಾಗೂ ೨ ಮೀ ಸುತ್ತಳತೆ ಹೊಂದಿವೆ ನವರಂಗದ ಮಧ್ಯದಲ್ಲಿರುವ ನಾಲ್ಕು ಕಂಬಗಳು ಛಾವಣಿಯ ಭಾರವನ್ನು ಹೊತ್ತುಕೊಂಡು ನಿಂತಿವೆ. ಎಲ್ಲ ಕಂಬಗಳು ಅತಿ ಸುಂದರವಾಗಿ ಚಾಲುಕ್ಯ ಶೈಲಿಯಲ್ಲಿ ಅಲಂಕೃತವಾಗಿವೆ. ಮಧ್ಯದಲ್ಲಿ ಇತ್ತೀಚಿನ ಕೂರ್ಮದ ಉಬ್ಬುಶಿಲ್ಪವಿದೆ.

ಈ ದೇವಾಲಯದ ಮೇಲ್ಛಾವಣಿಯೂ ಸಮತಟ್ಟಾಗಿದ್ದು ಮತ್ತು ದೇವಾಲಯದ ಹೊರ ಆವರಣವು ಪೂರ್ಣವಾಗಿ ಮಣ್ಣಿನಿಂದ ಆವೃತವಾಗಿದೆ.

ಒಟ್ಟಿನ ಮೇಲೆ ಈ ದೇವಾಲಯವು ಕಲ್ಯಾಣ ಚಾಲುಕ್ಯರು ಆಳ್ವಿಕೆಯ ಅವಧಿಯಲ್ಲಿ ನಿರ್ಮಾಣವಾಗಿದ್ದು ಸುಮಾರು ಕ್ರಿ.ಶ. ೧೧೮೩ ರಲ್ಲಿ ದತ್ತಿ ಪಡೆದಿದೆ. ತದನಂತರ ಕಾಲದಲ್ಲಿ ಜೀರ್ಣೋದ್ಧಾರಗೊಂಡಿದೆ.

### ಕಲ್ಮೇಶ್ವರ ದೇವಾಲಯ

ಕಲ್ಮೇಶ್ವರ ದೇವಾಲಯವು ಸತ್ತಿ ಗ್ರಾಮದ ಮಧ್ಯದಲ್ಲಿದ್ದು, ಪೂರ್ವಾಭಿಮುಖವಾಗಿರುತ್ತದೆ. ಒಂದು ಗರ್ಭಗೃಹ, ಅರ್ಧಮಂಟಪ ಹಾಗೂ ನವರಂಗಹೊಂದಿದೆ. ಈ ಗರ್ಭಗೃಹದಲ್ಲಿ ಈಶ್ವರಲಿಂಗವು ಎತ್ತರವಾದ ಪೀಠದ ಮೇಲಿದೆ.

### ಗರ್ಭಗೃಹ

ಈ ದೇವಾಲಯದ ಗರ್ಭಗೃಹದ ಮೂಲೆಗಳಲ್ಲಿ ಚೌಕಾಕಾರ ನಾಲ್ಕು ಅರ್ಧ ಕಂಬಗಳಿವೆ. ಕಿಟಕಿ ಜಾಲಾಂಧ್ರಗಳಿರದೆ ಕತ್ತಲೆಯಿಂದ ಕೂಡಿದಾಗಿದೆ. ಗರ್ಭಗೃಹದ ಮೇಲ್ಛಾವಣಿಯೂ ಅಲಂಕೃತವಾಗಿದೆ. ಅದರಲ್ಲಿರುವ ಶಿವಲಿಂಗದ ಎದುರಿಗೆ ನಂದಿ ವಿಗ್ರಹವಿಲ್ಲ.

### ನವರಂಗ

ಈ ದೇವಾಲಯದ ನವರಂಗದಲ್ಲಿ ಹದಿನೆಂಟು ಕಂಬಗಳಿದ್ದು ಅವುಗಳನ್ನು ಎರಡು ಸಾಲಿನಲ್ಲಿ ನಿಲ್ಲಿಸಿದ್ದಾರೆ. ಕಂಬಗಳು ಬೃಹದಾಕಾರವಾಗಿದ್ದು ಲೇಥಿನಿಂದ ನಿರ್ಮಿಸಲ್ಪಟ್ಟಿವೆ. ಅದರ ಛತ್ತಿನಲ್ಲಿ ಆಳವಾದ ಸುಂದರವಾದ ಕೆತ್ತನೆಗಳಿಂದ ಕೂಡಿದ ಭುವನೇಶ್ವರಿಯಿದ್ದು ಅದು ಬಹಳ ಆಕರ್ಷನೀಯವಾಗಿದೆ.

### ಮುಖಮಂಟಪ

ಮುಖಮಂಟಪವು ಗಾತ್ರದಲ್ಲಿ ಚಿಕ್ಕದಾಗಿದ್ದು ಪ್ರಾಚೀನ ಕಾಲದ ಮುಖಮಂಟಪವು ನಾಶವಾಗಿದೆ. ಇತ್ತೀಚಿಗೆ ಕಟ್ಟಿಗೆಯಿಂದ ನಿರ್ಮಿತ ದ್ವಾರಬಾಗಿಲವಿದೆ. ಹೊರಗಡೆ ಒಂದು ವೀರಗಲ್ಲುವಿದೆ. ಇದು ಯುದ್ಧದ

ಸನ್ನಿವೇಶವನ್ನು ತಿಳಿಸುತ್ತದೆ.

ದ್ವಾರಗಳು

ಈ ದೇವಾಲಯದ ಗರ್ಭಗೃಹದ ಪ್ರವೇಶದ್ವಾರವು ತುಂಬಾ ಅಲಂಕೃತವಾಗಿದೆ. ಎರಡು ಬದಿಗೆ ಐದು ಹೆಡೆಯ ಸರ್ಪವಿದೆ. ಲಲಾಟ ಬಿಂಬದಲ್ಲಿ ಎರಡು ಬದಿಗೆ ಗಣಪತಿಯ ಉಬ್ಬು ಶಿಲ್ಪವಿದೆ.

ಈ ದೇವಾಲಯದ ಮೇಲ್ಭಾವಣಿಯೂ ಮಣ್ಣಿನ ಗೋಡೆಗಳಿಂದ ಮುಚ್ಚಲಾಗಿದೆ. ಸುತ್ತಲೂ ಇತ್ತೀಚಿಗೆ ಗೋಡೆಯನ್ನು ಕಟ್ಟಿದ್ದಾರೆ. ಈ ದೇವಾಲಯದ ವಾಸ್ತು ಲಕ್ಷಣಗಳಿಂದ ಅದನ್ನು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಿಸಿದ್ದು, ಇತ್ತೀಚಿನ ಕಾಲದಲ್ಲಿ ಜೀರ್ಣೋದ್ಧಾರಗೊಳಿಸುವ ಸಾಧ್ಯತೆ ಹೆಚ್ಚು ಉದಾಹರಣೆಗೆ ನವರಂಗ (ಸಭಾಮಂಟಪ) ಮುಖಮಂಟಪವಿದೆ.

೫) ತೆಲಸಂಗ

ಕಲ್ಮೇಶ್ವರ ದೇವಾಲಯ

ಅಥಣಿಯಿಂದ ಪೂರ್ವ ದಿಕ್ಕಿಗೆ ಸುಮಾರು ೩೬ ಕಿ.ಮೀ. ಅಂತರದಲ್ಲಿರುವ ಗ್ರಾಮವೇ ತೆಲಸಂಗ. ಇದು ಪ್ರಾಚೀನ ಘಟಿಕಾಸ್ಥಾನವಾಗಿತ್ತೆಂದು ಶಾಸನಾಧಾರಗಳಿಂದ ತಿಳಿದು ಬರುತ್ತದೆ. ಶಾಸನಾಧಾರಗಳಿಂದ ತಿಳಿದು ಬರುತ್ತದೆ. ಶಾಸನಗಳಲ್ಲಿ ಈ ಸ್ಥಳವನ್ನು ತಿಲಸಂಗವೆಂದು ಕರೆಯಲಾಗಿದೆ. ಗ್ರಾಮದ ಹೊರವಲಯದ ದಕ್ಷಿಣ ದಿಕ್ಕಿನಲ್ಲಿ ಏಕಕೂಟ ಮಾದರಿಯ ಕಲ್ಮೇಶ್ವರ ದೇವಾಲಯವಿದೆ. ಇದು ಎತ್ತರವಾದ ಹಾಳು ಮಣ್ಣಿನ ದಿಬ್ಬದ ಮೇಲಿದೆ.

ಕಲ್ಮೇಶ್ವರ ದೇವಾಲಯದ ಒಳ -ಹೊರ ಗೋಡೆಗಳ ಮೇಲೆ ಸುಣ್ಣದ ಲೇಪನವಿದ್ದು, ಶಿಖರವು ಕದಂಬ ನಾಗರ ಶೈಲಿಯಲ್ಲಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯ ಭಿತ್ತಿ ನಿರಾಲಂಕಾರವಾಗಿದೆ. ಕಪ್ಪು ಬಣ್ಣದ ಶಿಲಾತುಂಡುಗಳಿಂದ ನಿರ್ಮಿತವಾಗಿದೆ. ಗರ್ಭ ಗೃಹ ಮೇಲಿರುವ ಶಿಖರವನ್ನು ಗಾರೆ-ಗಚ್ಚಿನಿಂದ ನಿರ್ಮಿಸಿದ್ದಾರೆ. ಈ ದೇವಾಲಯದ ಗೋಡೆಗಳು ಸರಳವಾಗಿದ್ದು ಈ ದೇವಾಲಯ ನಿರ್ಮಾಣದ ಬಗ್ಗೆ ಇಲ್ಲಿಯವರಿಗೆ ಯಾವುದೇ ಶಾಸನಗಳು ದೊರೆತಿರುವದಿಲ್ಲ. ಆದರೂ ಸಹ ಇದರ ರಚನೆಯನ್ನು ನೋಡಿದರೆ ವಿಜಯನಗರ ಅರಸರ ಕಾಲದ್ದಾಗಿರಬೇಕೆನಿಸುತ್ತದೆ.

ಈ ದೇವಾಲಯವು ಚಿಕ್ಕದಾಗಿದ್ದು ಗರ್ಭಗೃಹ ಅಂತರಾಳ ನವರಂಗ ಹಾಗೂ ಮುಖಮಂಟಪವನ್ನು ಹೊಂದಿದ್ದು, ಮುಖಮಂಟಪವನ್ನು ಇತ್ತೀಚಿಗೆ ಜೀರ್ಣೋದ್ಧಾರಗೊಳಿಸಿದ್ದಾರೆ. ಗರ್ಭಗೃಹವು ಚೌಕಾಕಾರವಾಗಿದ್ದು ೩.೦೨ ಮೀ. ವಿಸ್ತೀರ್ಣ ಹೊಂದಿದೆ. ಇದರಲ್ಲಿ ೪ ಮೂಲೆಕಂಬಗಳು ಹಾಗೂ ಮಧ್ಯದಲ್ಲಿ ಚೌಕಪಾಣಿಪೀಠವನ್ನು ಹೊಂದಿರುವ ಲಿಂಗವಿದೆ. ಗರ್ಭಗೃಹ ದ್ವಾರವು ಆಕರ್ಷಣೀಯವಾಗಿದೆ. ಲಲಾಟ ಬಿಂಬದಲ್ಲಿ ಗಣಪತಿಯ ಉಬ್ಬು ಶಿಲ್ಪವಿದೆ. ಅಂತರಾಳವು ಗರ್ಭಗೃಹದಷ್ಟೇ ಉದ್ದಗಲವನ್ನು ಹೊಂದಿದ್ದು ಮಧ್ಯದಲ್ಲಿ ಚಿಕ್ಕದಾದ ನಂದಿಮೂರ್ತಿ ಇದೆ.

## ೬) ಕೊಕಟನೂರ

### ಕಲ್ಮೇಶ್ವರ ದೇವಾಲಯ

ಕೊಕಟನೂರ ಅಥಣಿಯಿಂದ ಪೂರ್ವಕ್ಕೆ ಸುಮಾರು ೧೮ ಕಿ.ಮೀ ಅಂತರದಲ್ಲಿದೆ. ಈ ಗ್ರಾಮವು ಐತಿಹಾಸಿಕ ಪವಿತ್ರ ಸ್ಥಳವಾಗಿದ್ದು, ಪ್ರಾಚೀನ ವಾಸ್ತು ಶಿಲ್ಪಕಲೆಯ ನೆಲೆಯೂ ಆಗಿದೆ. ಇಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ಕಲ್ಮೇಶ್ವರ ದೇವಾಲಯವಿದೆ. (ಚಿತ್ರ ನಂ.೩) ಈ ದೇವಾಲಯವು ತ್ರಿಕೂಟಾಚಲ ಮಾದರಿಯಾದಾಗಿದೆ. ಇದಕ್ಕೆ ಇರುವ ಇನ್ನಿತರ ಹೆಸರುಗಳೆಂದರೇ ತ್ರ್ಯಂಭಕೇಶ್ವರ, ಚಂದ್ರೇಶ್ವರ ಮತ್ತು ತ್ರಿಕೂಟೇಶ್ವರ ಈ ದೇವಾಲಯವು ವಾಸ್ತುಶಿಲ್ಪ ಮತ್ತು ಶಿಲಾಶಾಸನಗಳ ಆಗರವಾಗಿದ್ದು. ಕಲ್ಯಾಣಿ ಚಾಲುಕ್ಯರು ಮತ್ತು ಕಲಚೂರಿಗಳ ಆಳ್ವಿಕೆಗೆ ಸಂಬಂಧಪಟ್ಟ ಶಾಸನಗಳು ಲಭ್ಯವಾಗಿವೆ.[೫] ಈ ದೇವಾಲಯದ ನಿರ್ಮಾಣ ಮತ್ತು ನಿರ್ಮಾತೃಗಳ ಬಗ್ಗೆ ನಿರ್ದಿಷ್ಟವಾಗಿ ತಿಳಿಯದಿದ್ದರೂ ಸಹ ಶಾಸನಾದಾರಗಳಿಂದ ಇದು ಕಲ್ಯಾಣಿ ಚಾಲುಕ್ಯರ ಆಳ್ವಿಕೆಯಲ್ಲಿ ನಿರ್ಮಾಣವಾಗಿದೆಯೆಂದು ಸ್ಪಷ್ಟವಾಗಿ ತೀಳಿಯುತ್ತದೆ.

ತ್ರಿಕೂಟಾಚಲ ಮಾದರಿಯಲ್ಲಿದ್ದ ಈ ದೇವಾಲಯದಲ್ಲಿ ಮೂರು ಗರ್ಭಗೃಹಗಳು, ಮೂರು ಅರ್ಧ ಮಂಟಪಗಳು ಇವಕ್ಕೆ ಹೊಂದಿಕೊಂಡು ಒಂದು ನವರಂಗವಿದೆ. ನವರಂಗಕ್ಕೆ ಹೊಂದಿಕೊಂಡು ಹೊರಗಡೆ ಭಗ್ನಗೊಂಡಿರುವ ಮಂಟಪವಿದೆ. ಮುಖಮಂಟಪಕ್ಕೆ ಹೊಂದಿಕೊಂಡು ಇತ್ತೀಚೆಗೆ ನಿರ್ಮಿಸಿದ ಮಹಾದ್ವಾರವಿದೆ. ಮಹಾದ್ವಾರದ ಹೊರಗಡೆ ಗೋಡೆಯ ಮದ್ಯದಲ್ಲಿ ಯಾದವ ಅರಸರ ಕಾಲದ ಶಾಸನವಿದೆ.

### ಗರ್ಭಗೃಹ

ಕಲ್ಮೇಶ್ವರ ದೇವಾಲಯವು ಮೂರು ಗರ್ಭಗೃಹಗಳನ್ನು ಹೊಂದಿದೆ. ಎಲ್ಲ ಗರ್ಭಗೃಹಗಳಲ್ಲಿ ಶಿವಲಿಂಗಗಳಿವೆ ಮುಖ್ಯ ಗರ್ಭಗೃಹವು ಪೂರ್ವಾಭಿಮುಖವಾಗಿದ್ದು, ದಕ್ಷಿಣ ಮತ್ತು ಉತ್ತರಕ್ಕಿರುವ ಗರ್ಭಗೃಹಗಳು ಒಂದಕ್ಕೊಂದು ಎದುರು ಮುಖವಾಗಿದ್ದು. ಎರಡು ಗರ್ಭಗೃಹಗಳು ಪ್ರವೇಶ ದ್ವಾರವನ್ನು ಹೊಂದಿವೆ. ಮೇಲ್ಛಾವಣಿಯ ಮಧ್ಯದಲ್ಲಿ ಸುಂದರವಾಗಿ ಕೆತ್ತಿದ ಭುವನೇಶ್ವರಿಗಳಿವೆ. ಈ ಗರ್ಭಗೃಹಗಳಲ್ಲಿ ಯಾವುದೇ ಕಿಟಕಿ ಜಾಲಂದ್ರಗಳಿಂದ ಗರ್ಭಗೃಹಗಳಿಗೆ ಹೊಂದಿಕೊಂಡು ತೆರೆದ ಅಂತರಾಳವಿದೆ. ಇದು ಎರಡೆರಡು ಮೂಲೆ ಕಂಬಗಳನ್ನು ಹಾಗೂ ಮುಂಭಾಗದಲ್ಲಿ ಅರ್ಧಕಂಬಗಳನ್ನು ಹೊಂದಿದೆ. ಮುಖ್ಯ ಗರ್ಭಗೃಹದ ಅಂತರಾಳದ ಗೋಡೆಗೆ ಒರೆಯಾಗಿ ಯಾದವ ಅರಸ ರಾಮಚಂದ್ರದೇವನ ಕಾಲದ ಕ್ರಿ.ಶಕ. ೧೨೦೬ ರ ಶಿಲಾಶಾನಸವನ್ನು ನಿಲ್ಲಿಸಲಾಗಿದೆ.

ಈ ದೇವಾಲಯದ ಅರ್ಧಮಂಟಪಗಳಿಗೆ ಹೊಂದಿಕೊಂಡು ಒಂದು ನವರಂಗವಿದೆ. ಇದರ ಮಧ್ಯದಲ್ಲಿ ನಾಲ್ಕು ಪೂರ್ಣ ಕಂಬಗಳಿವೆ. ವರ್ತುಳಾಕಾರದ ಅಧಿಷ್ಟಾನವುಳ್ಳ ನಂದಿ ಮಂಟಪವಿದೆ. ಈ ದೇವಾಲಯದ ನವರಂಗದ ಮುಂದಗಡೆ ಮುಖಮಂಟಪವಿದೆ, ಆದರೆ ಇಂದು ಅದು ನಾಶವಾಗುತ್ತಿರುವುದನ್ನು ಕಾಣುತ್ತೇವೆ. ಅಳಿದುಳಿದ ಕುರುಹುಗಳಿಂದ ಅದರ ವಾಸ್ತುಲಕ್ಷಣಗಳನ್ನು ತಿಳಿಯಲಾಗಿದೆ.

ಈ ದೇವಾಲಯಕ್ಕೆ ಕಪ್ಪು ವರ್ಣದ ಗ್ರ್ಯಾನೈಟ್ ಶಿಲಾ ದಮ್ಮಿಗಳನ್ನು ಉಪಯೋಗಿಸಿದ್ದಾರೆ. ಮೇಲ್ಛಾವಣಿಯಲ್ಲಿ ಬೆಣಚು ಕಲ್ಲಿನ ಅಗಲವಾದ ದಮ್ಮಿಗಳನ್ನು ಉಪಯೋಗಿಸಿದ್ದಾರೆ. ಅಲಂಕೃತವಾದ ಅರ್ಧಕಂಬಗಳು ಒಂದರ ಪಕ್ಕದೊಲ್ಲೊಂದು ಇರುವಂತೆ ಅಳವಡಿಸಿದ್ದಾರೆ. ದೇವಾಲಯದ ಮೇಲ್ಛಾವಣಿಯು ಸಮತಟ್ಟಾಗಿದ್ದು ಶಿಖರ ಇರುವುದಿಲ್ಲಾ. ಒಟ್ಟಿನ ಮೇಲೆ ಈ ದೇವಾಲಯವನ್ನು ವಾಸ್ತುಲಕ್ಷಣಗಳಿಂದ ಯಾದವರ ಕಾಲದಲ್ಲಿ ನಿರ್ಮಿಸಲಾಗಿದೆ ಎಂದು ತೋರುತ್ತದೆ. ಇದಕ್ಕೆ ಆದಾರ ಅವರ ಕಾಲದ ಶಾಸನ ಇಲ್ಲಿ ಲಭ್ಯವಿದೆ.

೭) ಮದಭಾವಿ

ರಾಮಲಿಂಗೇಶ್ವರ ದೇವಾಲಯ

ಮದಭಾವಿ ಗ್ರಾಮವು ಅಥಣಿಯಿಂದ ವಾಯ್ಯುವಕ್ಕೆ ೧೬ ಕಿ.ಮೀ. ಅಂತರದಲ್ಲಿರುವುದು ಈ ಸ್ಥಳ ಪ್ರಾಚೀನ ಐತಿಹಾಸಿಕ ಸ್ಥಳವಾಗಿದೆ. ಇಲ್ಲಿ ಪ್ರಾಚೀನ ಅರಸು ಮನೆತನಗಳಾದ ಕಲಚೂರ್ಯ ಅರಸು ಮನೆತನಗಳಾದ ಕಲಚೂರ್ಯ ಅರಸ ವೀರ ಬಿಜ್ಜಳ ಮತ್ತು ಯಾದವ ದೊರೆ ಸಿಂಘಣದೇನ ಆಳ್ವಿಕೆಯ ಕಾಲದ ಕುರುಹುಗಳು (ಶಾಸನಗಳು) ಹಾಗೂ ಪುರಾತನ ಕಾಲದಲ್ಲಿ ನಿರ್ಮಿತವಾದ ಎರಡು ದೇವಾಲಯಗಳು ಇವೆ. ಆದರೆ ಇಂದು ಅವೆರಡು ದೇವಾಲಯಗಳು ಅರೆ ಭಗ್ನಗೊಂಡಿದ್ದು ಸಂಪೂರ್ಣವಾಗಿ ನಾಶವಾಗುವ ಹಂತದಲ್ಲಿವೆ.

ಈ ದೇವಾಲಯವು ಗ್ರಾಮದ ಹೊರ ಭಾಗದಲ್ಲಿ ಉತ್ತರ ದಿಕ್ಕಿನಲ್ಲಿದೆ. ಇದು ಪ್ರಾಚೀನ ಶೈಲಿಯನ್ನು ಮೈಗೂಡಿಸಿಕೊಂಡಿದೆ. ಉತ್ತರಾಭಿಮುಖವಾಗಿರುವದು ಪ್ರವೇಶದ್ವಾರವನ್ನು ಹೊಂದಿದೆ. ಈ ದೇವಾಲಯವು ಏಕಕೂಟ ಮಾದರಿಯ ತಲವಿನ್ಯಾಸವನ್ನು ಹೊಂದಿದೆ. ಗರ್ಭಗೃಹ ಹಾಗೂ ಅಂತರಾಳದ ಮುಂದಿನ ಭಾಗಗಳು ನಾಶವಾಗಿವೆ. ಅಷ್ಟೇ ಅಲ್ಲದೆ, ಈ ದೇಗುಲದ ಮೇಲ್ಛಾವಣಿಯ ಗೋಡೆಯೂ ಸಹ ಹಾಳಾಗಿದೆ. ಉಳಿದಿರುವ ದೇವಾಲಯದ ಭಾಗ ಗರ್ಭಗೃಹ ಹಾಗೂ ಅಂತರಾಳದ ಭಾಗಗಳು ಮಾತ್ರ ಉಳಿದಿದ್ದು ಮುಂಭಾಗೊಂದನ್ನು ಬಿಟ್ಟರೆ ದೇವಾಲಯದ ಇತರ ಹೊರಭಾಗಗಳನ್ನು ಗುರುತಿಸುವದು ಕಷ್ಟ ಹಾಗೇ ಈ ದೇವಾಲಯದ ವಿವರಣೆಯನ್ನು ತಿಳಿಸುವ ಮಾಹಿತಿ ಲಭ್ಯವಿಲ್ಲ. ಆದರೆ ದೇವಾಲಯದ ಒಳಭಾಗ ಹಾಗೂ ಮುಂಭಾಗದ ವಾಸ್ತುಶೈಲಿಯ ಅಲಂಕರಣೆಯು ಕಲ್ಯಾಣ ಚಾಲುಕ್ಯರ ಕಾಲದ್ದಾಗಿದ್ದು ಕ್ರಿ. ಶ. ೧೧ ನೇ ಶತಮಾನದ ಪೂರ್ವಾರ್ಧದಲ್ಲಿ ನಿರ್ಮಾಣ ಗೊಂಡಿರಬಹುದು.

ದೇವಾಲಯದ ಗರ್ಭಗ್ರಹ ಹಾಗೂ ಅಂತರಾಳದ ಪ್ರವೇಶ ದ್ವಾರಗಳು ಅಲಂಕೃತ ಶಾಖೆಗಳಾಗಿದ್ದು ಗರ್ಭಗ್ರಹವು ಚೌಕಾಕಾರದಲ್ಲಿದೆ. ಗರ್ಭಗ್ರಹವು ೨.೧೫ ಮೀಟರ ಒಳ ವಿಸ್ತೀರ್ಣ ಹೊಂದಿದ್ದು ನಾಲ್ಕು ಮೂಲೆಗಳಲ್ಲಿ ಕಂಬಗಳಿವೆ. ಮಧ್ಯದಲ್ಲಿ ಕಪ್ಪು ಶಿಲೆಯ ಲಿಂಗವಿದೆ. ಗರ್ಭಗೃಹಕ್ಕೆ ಜಾಲಂದ್ರಗಳಿಲ್ಲ. ಮುಚ್ಚಿದ ಅಂತರಾಳವಿದ್ದು ಇದರ ಒಳ ವಿನ್ಯಾಶವು ಆಯತಾಕಾರವಾಗಿದೆ. ಅಂತರಾಳವು ನಾಲ್ಕು ದಿಕ್ಕಿಗೆ ಕಂಬಗಳನ್ನು ಹೊಂದ್ದಿದ್ದು ಮಧ್ಯದಲ್ಲಿ ಭುವನೇಶ್ವರಿಯು ಕಮಲದ ಆಕಾರದಲ್ಲಿದೆ. ಈ ದೇವಾಲಯದ ನವರಂಗ ಶಿಥಿಲಗೊಂಡಿದ್ದು ಇದರಲ್ಲಿರುವ ನಂದಿಯ ವಿಗ್ರಹ ಭಗ್ನಗೊಂಡಿದೆ. ಈ ದೇವಾಲಯದ ಗರ್ಭಗ್ರಹ

ಹಾಗೂ ಅಂತರಾಳ ಸೂಕ್ಷ್ಮ ಕೆತ್ತನೆಯಿಂದ ಅಲಂಕೃತಗೊಂಡಿದೆ. ದ್ವಾರಶಾಖೆಗಳು ೦.೨೩ ಮೀ. ಅಗಲವಾಗಿದ್ದು ಲತಾ ಸುರಳಿ, ಅರ್ದಗಂಭ, ಪಟ್ಟಿಕೆಗಳಿಂದ ಅಲಂಕೃತವಾಗಿದೆ. ದ್ವಾರದ ಅಲಂಕರಣೆ ಸೂಕ್ಷ್ಮ ಕೆತ್ತನೆಯಿಂದ ಕೂಡಿದ್ದು ಮುಂಚಾಚಿದ ಪಂಜರವನ್ನು ನಿರ್ಮಿಸಿದ್ದಾರೆ. ಇದರಲ್ಲಿ ಐದು ದ್ರಾವಿಡ ಮಾದರಿಯ ಶಿಖರಗಳಿದ್ದು, ಇವುಗಳಲ್ಲಿ ಮಧ್ಯದಲ್ಲಿ ನೆಗೆಯುತ್ತಿರುವ ನಾಲ್ಕು ಸಿಂಹಗಳು ಮನಮೋಹಕವಾಗಿವೆ. ಹಾಗೇಯೇ ಅಂತರಾಳದ ದ್ವಾರದ ಪಕ್ಕದಲ್ಲಿ ನಕ್ಷತ್ರಾಕಾರದ ಶಾಖೆಗಳಲ್ಲಿ ಜಾಲಂದ್ರಗಳನ್ನು ಹೊಂದಿವೆ. ಈ ದೇವಾಲಯದ ಹೊರಗೋಡೆಯೂ ಸಂಪೂರ್ಣವಾಗಿ ನಾಶವಾಗಿದೆ. ಒಟ್ಟಿನ ಮೇಲೆ ಈ ದೇವಾಲಯ ಪ್ರಾಚೀನತೆಯ ಸಂಕೇತವಾಗಿದೆ.

ಮಹಾದೇವನ ದೇವಾಲಯ

ಇದೇ ಗ್ರಾಮದ ಇನ್ನೊಂದು ಪ್ರಾಚೀನ ದೇವಾಲಯವೇ ಮಹಾದೇವ ದೇವಾಲಯ. ಇದು ದ್ವಿಕೂಟ ಮಾದರಿಯ ತಳವಿನ್ಯಾಸವನ್ನು ಹೊಂದಿದೆ. ಎರಡು ಗರ್ಭಗೃಹ, ಎರಡು ಅಂತರಾಳಗಳನ್ನು ಹೊಂದಿದ್ದು, ಅಂತರಾಳಗಳಿಗೆ ಹೊಂದಿಕೊಂಡು ಒಂದು ವಿಶಾಲವಾದ ನವರಂಗವಿದೆ. ನವರಂಗಕ್ಕೆ ದಕ್ಷಿಣ ಹಾಗೂ ಉತ್ತರಾಭಿ ಮುಖಮಾಡಿ ಎರಡು ಪ್ರವೇಶ ದ್ವಾರಗಳಿವೆ. ಇಂದು ಉತ್ತರ ದಿಕ್ಕಿನ ದ್ವಾರವನ್ನು ಮುಚ್ಚಲಾಗಿದೆ.

ಈ ದೇವಾಲಯವು ಎರಡು ಗರ್ಭಗೃಹಗಳನ್ನು ಹೊಂದಿದ್ದು ಪೂರ್ವ ಹಾಗೂ ಪಶ್ಚಿಮಾಭಿಮುಖ ವಾಗಿವೆ. ಎರಡು ಗರ್ಭಗೃಹದಲ್ಲಿ ಈಶ್ವರ ಲಿಂಗವಿದ್ದು ಪ್ರವೇಶ ದ್ವಾರವನ್ನು ಹೊಂದಿದ್ದು, ಮೂಲೆ ಕಂಬಗಳನ್ನು ಹೊಂದಿದ್ದು ಗಾತ್ರದಲ್ಲಿ ಒಂದಕ್ಕೊಂದು ಸಮವಾಗಿವೆ. ಇವುಗಳ ಮೇಲ್ಛಾವಣಿಯ ಮಧ್ಯದಲ್ಲಿ ಸುಮದುರವಾದ ಭುವನೇಶ್ವರಗಳಿವೆ.

ಈ ದೇವಾಲಯ ಎರಡು ಅರ್ಧಮಂಟಪಗಳಿಗೆ ಹೊಂದಿಕೊಂಡು ವಿಶಾಲವಾದ ಹಾಗೂ ಚೌಕಾಕೃತಿಯುಳ್ಳ ಒಂದು ನವರಂಗವಿದೆ. ಈ ನವರಂಗದಲ್ಲಿ ೧೦ ಸ್ತಂಭಗಳಿವೆ. ಇವುಗಳಲ್ಲಿ ೪ ಕಂಬಗಳು ಗೋಡೆಯಲ್ಲಿದ್ದು ಅರ್ಧ ಕಂಬಗಳಾಗಿವೆ. ನವರಂಗವು ಗರ್ಭಗೃಹದ ಎದುರಿನ ಭಾಗದಲ್ಲಿ ಪ್ರವೇಶ ದ್ವಾರವನ್ನು ಹೊಂದಿದೆ. ಈ ದ್ವಾರದ ಎರಡು ಬದಿಗೆ ಜಾಲಂದ್ರಗಳಿವೆ.

ನವರಂಗಕ್ಕೆ ಹೊಂದಿಕೊಂಡಿರುವ ಮುಖಮಂಟಪವಿದೆ. ಬಹಳ ಎತ್ತರವಿರದೆ ನೆಲಕ್ಕೆ ಸಮಾನಂತರವಾಗಿ ನಿರ್ಮಿಸಿದ್ದಾರೆ. ದೇವಾಲಯದ ಬಲಬದಿಗೆ ತ್ರುಟಿತಗೊಂಡ ಕ್ರಿ.ಶ. ೧೧೬೨ ಶಾಸನವಿದೆ.

ಈ ದೇವಾಲಯದ ಎರಡು ಗರ್ಭಗೃಹಗಳಿಗೆ ಪ್ರವೇಶದ್ವಾರಗಳಿವೆ. ಲಲಾಟಬಿಂಬದಲ್ಲಿ ಯಾವುದೇ ಉಬ್ಬು ಶಿಲ್ಪಗಳಿರುವದಿಲ್ಲ. ಪಾರ್ಶ್ವದ ಪ್ರವೇಶದ್ವಾರಗಳು ಪ್ರಾಚೀನ ಶೈಲಿಯದಾಗಿದ್ದು ದ್ವಾರ ಶಾಖೆಗಳನ್ನು ಹೊಂದಿವೆ. ಈ ಎರಡು ಪ್ರವೇಶದ್ವಾರಗಳು ಒಂದಕ್ಕೊಂದು ಸಮಾನವಾಗಿವೆ.

ಚಾಲುಕ್ಯ ಶೈಲಿಯನ್ನು ಹೋಲುವ ವಿಶಿಷ್ಠ ಕೆತ್ತನೆಯಿಂದ ಕೂಡಿರುವ ಕಂಬಗಳು ಮಹಾದೇವ ದೇವಾಲಯದಲ್ಲಿವೆ. ಅವೆಲ್ಲವೂ ಪೀಠಾಧಾರಿತವಾಗಿದ್ದು ಮೇಲ್ಛಾವಣಿಯ ಭಾರವನ್ನು ಹೊತ್ತಿವೆ. ಈ

ದೇವಾಲಯದಲ್ಲಿ ಒಟ್ಟು ೧೮ ಕಂಬಗಳಿವೆ. ಅವುಗಳಲ್ಲಿ ೮ ಕಂಬಗಳು ಪೂರ್ಣ ಕಂಬಗಳು ಉಳಿದವು ಮೂಲೆ ಹಾಗೂ ಗೋಡೆಗಳ ಅರ್ಧಕಂಬಗಳಾಗಿವೆ. ಲೇಥನಲ್ಲಿ ಸಿದ್ಧಗೊಂಡಿದ್ದು ಸೂಕ್ಷ್ಮ ಕೆತ್ತನೆಯಿಂದ ನಿರ್ಮಿವಾಗಿವೆ.

೮) ಕೊಟ್ಟಲಗಿ

ಅಥಣಿ ತಾಲೂಕಿನ ಕೊಟ್ಟಲಗಿ ಗ್ರಾಮದಲ್ಲಿ ಇತಿಹಾಸ ಪ್ರಸಿದ್ಧವಾದ ಕಲ್ಯಾಣ ಚಾಲುಕ್ಯರ ಕಾಲದ ಕಲಾ ಲಿಂಗೇಶ್ವರ ದೇವಾಲಯವಿದೆ.(ಚಿತ್ರ ನಂ. ೧೫)

ಮಠಗಳು

ಹತ್ತು ತಾಲೂಕುಗಳನ್ನು ಹೊಂದಿರುವ ಉತ್ತರ ಕರ್ನಾಟಕದ ಬೆಳಗಾವಿ ಜಿಲ್ಲೆಯ ಒಂದು ತಾಲೂಕು ಅಥಣಿ. ಹಲವಾರು ಪ್ರಮುಖ ತೀರ್ಥಕ್ಷೇತ್ರಗಳನ್ನು ಹೊಂದಿದೆ. ಇವು ಯಾತ್ರಾಸ್ಥಳಗಳೂ ಆಗಿದ್ದು, ಕರ್ನಾಟಕವಷ್ಟೇ ಅಲ್ಲದೇ ಬೇರೆ ಬೇರೆ ರಾಜ್ಯದ ಭಕ್ತರನ್ನು ಆಕರ್ಷಿಸಿವೆ.

ಅಥಣಿ ದಕ್ಷಿಣದ ಕಾಶಿ

ದಕ್ಷಿಣೋತ್ತರವಾಗಿ ಹಾಗೂ ಪೂರ್ವದಿಂದ ಪಶ್ಚಿಮಕ್ಕೆ ಹರಿವ ಹೊಳೆ, ಹಳ್ಳ ಎಲ್ಲಿರುವವೋ ಆ ಸ್ಥಾನ ಪುಣ್ಯ ಕ್ಷೇತ್ರ ಎನ್ನುವ ಪ್ರತೀತಿ ಇದೆ. ಕಾಸಿಯಲ್ಲಿ ಗಂಗಾನದಿಯು ದಕ್ಷಿಣೋತ್ತರವಾಗಿ ಹರಿಯುತ್ತಿದ್ದುದರಿಂದಲೇ ಅದು ಪವಿತ್ರ ಕ್ಷೇತ್ರವೆನಿಸಿತು ಅದಕ್ಕಾಗಿ ಶಿವನು ಕಾಶಿಯಲ್ಲಿ ವಿಶ್ವೇಶ್ವರ ಹೆಸರಿನಿಂದ ಜ್ಯೋತಿರ್ಲಿಂಗ ರೂಪದಿಂದ ನೆಲೆಸಿದ. ಇದರಂತೆ ಕರ್ನಾಟಕದ ಬೆಳಗಾವಿ ಜಿಲ್ಲೆಯ ಅಥಣಿಯಲ್ಲಿ ಗಂಗಾನದಿಯ ಪರ್ಯಾಯ ಹೆಸರೆನಿಸಿದ ಭಾಗೀರಥಿ ನಾಮದ ಹಳ್ಳವು ಮೊದಲು ದಕ್ಷಿಣೋತ್ತರವಾಗಿ ಹರಿದು ಬಳಿಕ ಪೂರ್ವದಿಂದ ಪಶ್ಚಿಮಕ್ಕೆ ಹರಿದು ಈ ತಾಣವು ಪಾವನ ಕ್ಷೇತ್ರವೆನಿಸಿದೆ. ಇದರಿಂದಾಗಿ ಅಥಣಿ ದಕ್ಷಿಣದ ಕಾಸಿ ಎನಿಸಿದೆ. ಅಥಣಿಯ ಗ್ರಾಮದೇವತೆ ಸಿದ್ಧೇಶ್ವರ ಅವರ ಸಮಕಾಲೀನರು ಇಲ್ಲಿನ ಗವಿಸಿದ್ಧೇಶ್ವರ. ಆ ಬಳಿಕ ಅನೇಕ ತಪಸ್ವಿಗಳು ಅಥಣಿಯಲ್ಲ ನೆಲೆನಿಂತಿದ್ದಾರೆ. ಶ್ರೀ ಮುರುಘೇಂದ್ರ ಶಿವಯೋಗಿಗಳ (೧೮೩೬-೧೯೨೧ ) ಪ್ರಭಾವ ಅಥಣಿಯನ್ನು ಅಂತರರಾಷ್ಟ್ರೀಯ ಮಟ್ಟದಲ್ಲಿ ಗೋಚರವಾಗುವಂತೆ ಮಾಡಿದೆ.

ಊರ ಹೊರಗೆ ಪೂರ್ವ ದಿಕ್ಕಿಗೆ ವಿಶಾಲವಾದ ಪ್ರದೇಶದಲ್ಲಿ ಗ್ರಾಮದೇವತೆಯಾದ ಶ್ರೀ ಸಿದ್ಧೇಶ್ವರ ದೇವಾಲಯವಿದೆ. ಊರ ಮಧ್ಯದಲ್ಲಿ ಜಕ್ಕಣನ ಶಿಲ್ಪಕಲೆಗಳನ್ನು ನೆನಪಿಸುತ್ತಿರುವ ಅಮೃತ ಲಿಂಗೇಶ್ವರ ಗುಡಿ ಇದೆ. ಸನಿಹದಲ್ಲಿಯೇ ಗಜಾನನ ಮಂದಿರ ಹಾಗೂ ಕಲ್ಮೇಶ್ವರ ದೇವಾಲಯಗಳಿವೆ. ಸ್ವಲ್ಪ ಅಂತರದಲ್ಲಿಯೇ ಶ್ರೀರಾಮ ಮಂದಿರ ಹಾಗೂ ಶ್ರೀ ನರಸಿಂಹ ದೇವಾಲಯಗಳು ಇವೆ. ದಕ್ಷಿಣಕ್ಕೆ ವಿಶಾಲವಾದ ಮಾರುತಿ ಮಂದಿರ, ಸನಿಹದಲ್ಲಿಯೇ ವಿಶಾಲ ಅಂಗಳದಲ್ಲಿ ಶ್ರೀ ಲಕ್ಷ್ಮೀ ವೆಂಕಟೇಶ ದೇವಾಲಯವಿದೆ. ಹೀಗೆ ದೇವಾಲಯಗಳ ತಾಣವೇ ಅಥಣಿಯಾಗಿದೆ. ಈ ಅಥಣಿ ದಕ್ಷಿಣದ ಕಾಸಿ ಎಂದು ಹೆಸರುವಾಗಿಯಾಗಿದೆ. ಇವುಗಳ ಬಗ್ಗೆ ಐತಿಹಾಸಿಕವಾಗಿ ಅಭ್ಯಸಿಸಿದಾದ ಇಲ್ಲಿನ ಸಾಹಿತ್ಯಕ ಸಾಂಸ್ಕೃತಿಕ ಸಾಮಾಜಿಕ, ಧಾರ್ಮಿಕ ಅಂಶಗಳ ಮೇಲೆ ಬೆಳಕು ಚೆಲ್ಲುಬಹುದಾಗಿದೆ.

**ಅಥಣಿ ಸುಕ್ಷೇತ್ರ ಗಚ್ಚಿನ ಮಠ**

ವೈರಾಗ್ಯ ಮೂರ್ತಿಗಳಾದ ಶಿವಯೋಗಿಗಳು ಮಠದ ಅಧಿಕಾರ ವಹಿಸಿಕೊಳ್ಳದೇ, ಬಸವತತ್ವ ಪ್ರಚಾರದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಅನೇಕ ಪವಾಡಗಳನ್ನು ಮರೆದಿದ್ದಾರೆ. ಮೈಸೂರು ಒಡೆಯರು, ಲೋಕಮಾನ್ಯ ಟಿಳಕರಾದಿಯಾಗಿ ನಾಡಿನ ಹೆಸರಾಂತ ಗಣ್ಯರು ಇಲ್ಲಿಗೆ ಭೆಟ್ಟಿ ನೀಡಿ ಶಿವಯೋಗಿಗಳ ಮತ್ತು ಶ್ರೀಮಠದ ದರ್ಶನ ಪಡೆದಿದ್ದಾರೆ. (ಚಿತ್ರ ನಂ.೪) ಪ್ರತಿ ವರುಷ ಶಿವರಾತ್ರಿ ಸಮಯದಲ್ಲಿ ಶರಣ ಸಂಸ್ಕೃತಿ ಉತ್ಸವ ಹಾಗೂ ಚೈತ್ರದಲ್ಲಿ ೫ ದಿನಗಳ ಜಾತ್ರಾ ಉತ್ಸವ ನಡೆಯುತ್ತದೆ.[೬]

ತಾಲೂಕಾ ಕೇಂದ್ರ ಸ್ಥಳವಾದ ಅಥಣಿಯು ಕರ್ನಾಟಕದ ಗಡಿನಾಡಾಗಿದೆ. ಅಥಣಿ ತಾಲೂಕು ಸಾಂಸ್ಕೃತಿಕ ಪರಂಪರೆಯಲ್ಲಿ, ರಾಜಕೀಯ ರಂಗದಲ್ಲಿ, ಸಾಹಿತ್ಯಿಕ ಹಾಗೂ ಧಾರ್ಮಿಕ ರಂಗದಲ್ಲಿ ಅಭಿವೃದ್ಧಿಯನ್ನು ಕಂಡಿದೆ. ಅಥಣಿ ತಾಲೂಕಿನಲ್ಲಿ ೧೨೦ ಮಠಗಳು ಸ್ಥಾಪನೆಯಾಗಿದ್ದವು ಎಂದು ತಿಳಿದು ಬರುತ್ತದೆ. ಆದರೆ ಇಂದು ಗುರುತಿಸಬಹುದಾದ ಕೇವಲ ೧೦ ಮಠಗಳು ಅಸ್ತಿತ್ವದಲ್ಲಿದ್ದು, ಧಾರ್ಮಿಕ, ಸಾಮಾಜಿಕ ಕಾರ್ಯಗಳನ್ನು ನಡೆಸಿಕೊಂಡು ಬರುತ್ತಿವೆ. ಅಥಣಿಯಲ್ಲಿ ೧೬ ನೇಯ ಶತಮಾನಕ್ಕೂ ಮೊದಲು ಹಲವು ವೀರಶೈವ ಮಠಗಳು ಸ್ಥಾಪನೆಯಾದ ಉದಾಹರಣೆಗಳಿವೆ. ಇವುಗಳಲ್ಲಿ ಶ್ರೀ ಗಚ್ಚಿನಮಠ ಒಂದಾಗಿದೆ. ಈ ಮಠದ ಜೊತೆಗೆ ಶ್ರೀ ಮೋಟಗಿಮಠ, ಶ್ರೀ ಗೋಟಖಿಂಡಿಮಠ, ಶ್ರೀ ಶೇಟ್ಟರಮಠ (ಕುಮಾರಮಠ) ಶ್ರೀ ಹಿರೇಮಠ ಮೊದಲಾದ ಮಠಗಳು ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು, ಧಾರ್ಮಿಕ ಕೆಲಸ ಕಾರ್ಯಗಳನ್ನು ನಡೆಸಿಕೊಂಡು ಬರುತ್ತಿವೆ.

ಮಠ ಪೀಠಗಳ ಗತ ವೈಭವದ ವೀರಶೈವ ಉಜ್ವಲ ಇತಿಹಾಸ-ಪರಂಪರೆ ಚಾರಿತ್ರ್ಯ ಮೆಲುಕು ಹಾಕುತ್ತ ಹೋದಂತೆ ಪ್ರತಿ ಮಠ ಮಾನ್ಯಗಳಿಗೆ ತನ್ನದೇ ಆದ ಒಂದು ಭವ್ಯ ಇತಿಹಾಸ ಕಂಡು ಬರುವುದು ಸ್ವಾಭಾವಿಕ, ವೀರಶೈವ ಮಠಗಳು ಈ ನಾಡಿನ ಸಂಸ್ಕೃತಿಯ ಪ್ರತೀಕಗಳು, ಪರಂಪರಾಗತ ಮೌಲ್ಯಗಳನ್ನು ಎತ್ತಿ ಹಿಡಿದು ಧರ್ಮ ಪ್ರಚಾರ ಮಾಡುವ ಕೇಂದ್ರಗಳಾಗಿವೆ. ಅಂತಹ ಇತಿಹಾಸ ಹೊಂದಿರುವ ಶ್ರೀ ಸುಕ್ಷೇತ್ರ ಗಚ್ಚಿನ ಮಠ ಒಂದಾಗಿದ್ದು, ಅಥಣಿ ನಗರದ ಆಧ್ಯಾತ್ಮದ , ಸಾಂಸ್ಕೃತಿಕ ಸಾಹಿತ್ಯಿಕ ನೆಲೆಯಾಗಿದೆ.

ಶ್ರೀಮದಥಣಿ ಗಚ್ಚಿನಮಠ ಪದರೂಪನಿಷ್ಪತ್ತಿ : ಶ್ರೀಮದಥಣಿ ಗಚ್ಚಿನಮಠ ಎಂಬ ಪದವು, ಶ್ರೀ ಶಿವಯೋಗಿಗಳ ಚರಿತ್ರೆ ಹಾಗೂ ಅವರ ಕುರಿತ ಅನೇಕ ಕಾವ್ಯಗಳಲ್ಲಿ ಮತ್ತು ಹಿಂದಿನ ಅನೇಕ ಗ್ರಂಥಗಳಲ್ಲಿ ಕಂಡು ಬರುತ್ತದೆ. ಶ್ರೀಮತ್ + ಅಥಣಿ = ಶ್ರೀಮದಥಣಿ, 'ಶ್ರೀಮತ್ ' ಅಂದರೆ ಸಂಪತ್ತಿನಿಂದ ಮಾನ್ಯವಾದ ಸಂಪತ್ತಭರಿತ ಧರ್ಮದ ನಾಡು ಎಂದು ಅರ್ಥವಾಗುತ್ತದೆ. ಅಥಣಿ ಇದರ ರೂಪ ನಿಷ್ಪತ್ತಿಯ ಬಗ್ಗೆ ವಾದ ಪ್ರತಿವಾದಗಳಿವೆ. ಅಥಣಿ ಇದು ಅಧಣಿ ಎಂಬ ಅಪಭ್ರಂಶದಿಂದ ಉಂಟಾಗಿದೆ ಎಂದು ಹೇಳುತ್ತಾರೆ. ಈ ಊರು ಧಣಿ ಅಥವಾ ಯಜಮಾನ ಇಲ್ಲದ ಊರು ಅಧಣಿ - ಅಥಣಿಯಾಗಿದೆ. ಶ್ರೀ ಗಚ್ಚಿನಮಠದ ರೂಪನಿಷ್ಪತ್ತಿ ಅತ್ಯಂತ ಸರಳವಾಗಿದೆ. ಈ ಮಠವನ್ನು ಮಣ್ಣಿನ ಗಚ್ಚಿನಿಂದ ನಿರ್ಮಿಸಿರುವದರಿಂದ ಈ ಮಠಕ್ಕೆ '' ಗಚ್ಚಿನ ಮಠ'' ಎಂಬ ಹೆಸರು ಬಂದಿದೆ. ಗಚ್ಚು ಎಂದರೆ ವಾಸ್ತುವನ್ನು ಗಟ್ಟಿಗೊಳಿಸುವ ವಸ್ತು ಅದು ಶಕ್ತಿ, ದೃಢತೆ, ಸಾಮರ್ಥ್ಯಕ್ಕೆ ಸಂಕೇತ.

ಶ್ರೀ ''ಗಚ್ಚಿನ ಮಠ'' ಸ್ಥಾಪನೆ : ೧೬ ನೇ ಶತಮಾನದಲ್ಲಿ ಶ್ರೀ ರೇವಣಸಿದ್ಧ ಸ್ವಾಮಿಗಳು ಲೋಕ ಸಂಚಾರ ಕೈಗೊಂಡು ಇಲ್ಲಿಗೆ ಬಂದು ನೆಲೆಸಿ, ಧರ್ಮೋಪದೇಶವನ್ನು ಮಾಡುವದರ ಮೂಲಕ ಜನರಲ್ಲಿ

ಧರ್ಮ ಜಾಗೃತಿಯನ್ನುಂಟು ಮಾಡಿದರು. ಅಥಣಿಯ ಹೊರಭಾಗದಲ್ಲಿ (ಇಂದು ಅಥಣಿಯ ಮಧ್ಯದಲ್ಲಿ) ವೀರಶೈವ ಮಠವನ್ನು ಸ್ಥಾಪನೆ ಮಾಡಿ, ಧಾರ್ಮಿಕ , ಸಾಮಾಜಿಕ ಕಾರ್ಯಗಳನ್ನು ಹಾಗೂ ಅನ್ನದಾಸೋಹ ನಡೆಯುವಂತೆ ವ್ಯವಸ್ಥೆಗೊಳಿಸಿದರು. ಶ್ರೀಮಠವು ಮರುಘಾ ಸಂಪ್ರದಾಯದ ವಿರಕ್ತ ಮಠವಾಗಿದೆ. ಅಂದು ಸ್ಥಾಪನೆಗೊಂಡ ಈ ಮಠದಲ್ಲಿ ಅನೇಕ ಗುರುವರ್ಯರು ತಪಸ್ಸುಗೈದಿದ್ದಾರೆ. ಈ ಮಠವು ಶ್ರೀ ಮುರುಘೇಂದ್ರ ಶಿವಯೋಗಿಗಳ ಮತ್ತು ಶ್ರೀ ಸಿದ್ಧಲಿಂಗ ಚರವರೇಣ್ಯರ ಕಾಲದಲ್ಲಿ ಹೆಚ್ಚು ಹೆಸರು ಪಡೆಯಿತು. ಈ ಮಠವು ವಟುಗಳನ್ನು, ಸಾಧಕರನ್ನು, ಸಿದ್ದಪಡಿಸುವ ಕೇಂದ್ರವು ಆಗಿತ್ತು.

ಇಂದು ನಾಡಿನ ಪ್ರತಿಷ್ಠಿತ ಮಠಗಳಲ್ಲಿ ಶ್ರೀ ಗಚ್ಚಿನಮಠವು ಒಂದಾಗಿದೆ. ಶ್ರೀ ಗಚ್ಚಿನಮಠದ ಪರಂಪರೆ : ಈ ಮಠದ ಪರಂಪರೆಯಲ್ಲಿ ಅನೇಕ ಮಹಾಪುರುಷರು ತಪಗೈದು ಜಗತ್ತ ಪ್ರಸಿದ್ಧರಾಗಿ ಅಥಣಿ ಕ್ಷೇತ್ರವನ್ನು ಅವಿಮುಕ್ತ ಕ್ಷೇತ್ರವನ್ನಾಗಿಸಿದ ಮಹನೀಯರನ್ನು ಈ ಕೆಳಗಿನಂತೆ ಗುರುತಿಸಬಹಯದಾಗಿದೆ.

ಶ್ರೀ ಮ.ನಿ.ಪ್ರ. ರೇವಣಸಿದ್ಧ ಮಹಾಸ್ವಾಮಿಗಳು (ಕರ್ತೃಗುರುಗಳು) , ಶ್ರೀ ಮ.ನಿ.ಪ್ರ. ಗುರುಶಾಂತ ಸ್ವಾಮಿಗಳು, ಶ್ರೀ ಮ.ನಿ.ಪ್ರ. ಮರುಳಶಂಕರ ಸ್ವಾಮಿಗಳು, ಶ್ರೀ ಮ.ನಿ.ಪ್ರ. ಮುರುಘೇಂದ್ರ ಸ್ವಾಮಿಗಳು, ಶ್ರೀ ಮ.ನಿ.ಪ್ರ. ಮೊದಲನೆಯ ಚನ್ನಬಸವ ಸ್ವಾಮಿಗಳು, ಶ್ರೀ ಮ.ನಿ.ಪ್ರ.ಎರಡನೆಯ ಮರುಳಶಂಕರ ಸ್ವಾಮಿಗಳು, ಶ್ರೀ ಮ.ನಿ.ಪ್ರ. ಎರಡನೆಯ ಗುರುಶಾಂತ ಸ್ವಾಮಿಗಳು, ಶ್ರೀ ಮ.ನಿ.ಪ್ರ. ಎರಡನೆಯ ಚನ್ನಬಸವ ಸ್ವಾಮಿಗಳು, ಶ್ರೀ ಮ.ನಿ.ಪ್ರ.ಸಿದ್ಧಲಿಂಗ ಮಹಾಸ್ವಾಮಿಗಳು, ಶ್ರೀ ಮ.ನಿ.ಪ್ರ. ಮೂರನೆಯ ಚನ್ನಬಸವ ಸ್ವಾಮಿಗಳು, ಶ್ರೀ ಮ.ನಿ.ಪ್ರ. ಶಿವಲಿಂಗ ಮಹಾಸ್ವಾಮಿಗಳು, ಶ್ರೀ ಮ.ನಿ.ಪ್ರ. ಮಲ್ಲಿಕಾರ್ಜುನ ಮಹಾಸ್ವಾಮಿಗಳು, ಶ್ರೀ ಮ.ನಿ.ಪ್ರ. ನಾಲ್ಕನೆಯ ಚನ್ನಬಸವ ಸ್ವಾಮಿಗಳು (ಇಂದಿನ ಸ್ವಾಮಿಗಳು)

ಮಠದ ಪೀಠಾಧಿಕಾರಿಯಾಗದೇ ಲೋಕಕಲ್ಯಾಣಕ್ಕಾಗಿ ತಪೋನಿರತರಾದ ಪೂಜ್ಯ ಶ್ರೀಗಳು. ಶ್ರೀ ಮ.ನಿ.ಪ್ರ. ಮುರುಘೇಂದ್ರ ಶಿವಯೋಗಿಗಳು, ಶ್ರೀ ಮ.ನಿ.ಪ್ರ.ಗುರುಶಾಂತ ಮಹಾಸ್ವಾಮಿಗಳು, ಪೂಜ್ಯಶ್ರೀ ಮರುಳಶಂಕರ ದೇವರು. ಕರ್ತೃ ಗುರುಗಳ ನಂತರ ಅಧಿಕಾರಕ್ಕೆ ಬಂದ ಎಲ್ಲ ಗುರುಗಳು ತಪೋನಿಷ್ಠರಾಗಿ ಮಠವನ್ನು ಅಭಿವೃದ್ಧಿಪಡಿಸಿದ್ದಾರೆ ಹಾಗೂ ಕಾಲದಿಂದ ಕಾಲಕ್ಕೆ ಜೀರ್ಣೋದ್ಧಾರ ಗೊಳಿಸಿದ್ದಾರೆ.

ಶ್ರೀ ಮ.ನಿ.ಪ್ರ. ಎರಡನೆಯ ಚೆನ್ನಬಸವ ಸ್ವಾಮಿಗಳು ಈ ಮಠವನ್ನು ನವೀಕರಣಗೊಳಿಸಿ ಕಟ್ಟಿಸಿದರೆಂಬ ಉಲ್ಲೇಖವಿದೆ. ಹನ್ನೆರಡನೆಯ ಗುರುಗಳಾದ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ಅಧಿಕಾರವನ್ನು ವಹಿಸಿಕೊಂಡು ಮಠವನ್ನು ಬೆಳೆಸಿದರು. ಇವರು ಚಿತ್ರದುರ್ಗದ ಬೃಹನ್ಮಠ ಜಗದ್ಗುರು ಶ್ರೀ ಜಯವಿಭವ ಸ್ವಾಮಿಗಳ ಕೃಪಾಶೀರ್ವಾದಕ್ಕೆ ಒಳಗಾಗಿ, ಬೃಹನ್ಮಠದ ಜಗದ್ಗುರುಳಾಗಿ ೧೯೬೪ ರಲ್ಲಿ ಪಟ್ಟಾಧಿಕಾರವನ್ನು ವಹಿಸಿಕೊಂಡರು. ನಂತರ ಶ್ರೀ ಮ.ನಿ.ಪ್ರ. ನಾಲ್ಕನೆಯ ಚನ್ನವಸವ ಸ್ವಾಮಿಗಳಿಗೆ ೧೯೮೬ರಲ್ಲಿ ಗಚ್ಚಿನಮಠದ ಅಧಿಕಾರವನ್ನು ನೀಡಲಾಯಿತು. ಇವರು ಹಾವೇರಿ ಜಿಲ್ಲೆಯ ಅಗಡಿ ಮತ್ತು ಬೆಳಗಾವಿ ಜಿಲ್ಲೆಯ ಅಥಣಿ ಎರಡು ಮಠಗಳ ಆಡಳಿತವನ್ನು ವಹಿಸಿಕೊಂಡು, ಮಠವನ್ನು ಅಭಿವೃದ್ಧಿ ಪಡಿಸುತ್ತಿದ್ದಾರೆ. ಇತ್ತೀಚಿಗೆ ಚಿತ್ರದುರ್ಗದ ಶ್ರೀ ಶಿವಮೂರ್ತಿ ಮುರಘುರಾಜೇಂದ್ರ ಶರಣರು ಶ್ರೀ ಮಠದಲ್ಲಿ ಶಿವರಾತ್ರಿಯ ಸಂದರ್ಭದಲ್ಲಿ ಸಹಜ ಶಿವಯೋಗ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮ ಮೊದಲಾದವುಗಳನ್ನು ಆಚರಿಸುತ್ತಿದ್ದಾರೆ.

## ಶ್ರೀ ಗಚ್ಚಿನಮಠದ ಗದ್ದುಗೆಗಳು :

ಶ್ರೀ ರೇವಣಸಿದ್ದ ಮಹಾಸ್ವಾಮಿಗಳಿಂದ ನಂತರ ಬಂದ ಅನೇಕ ಮಹಾಸ್ವಾಮಿಗಳ ಗದ್ದುಗೆಗಳು ಶ್ರೀ ಮಠದಲ್ಲಿ ಇರುತ್ತವೆ ಎಂದು ಹಿರಿಯರು ಹೇಳುತ್ತಾರೆ. ಶ್ರೀ ಮ.ನಿ.ಪ್ರ. ಮರುಳಶಂಕರ ಸ್ವಾಮಿಗಳ ಗದ್ದುಗೆ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳ ಎಡಭಾಗಕ್ಕೆ ಇರುವ ಕಲ್ಯಾಣಮಂಟಪದ ಮಧ್ಯದಲ್ಲಿರುವದು. ಆದರೆ ಇಂದು ನಾವು ಶ್ರೀ ಮ.ನಿ.ಪ್ರ. ಸಿದ್ದಲಿಂಗ ಮಹಾಸ್ವಾಮಿಗಳ ಗದ್ದುಗೆಯನ್ನು, ಶ್ರೀ ಮುರುಘೇಂದ್ರ ಶಿವಯೋಗಿಗಳ ಗದ್ದುಗೆಯನ್ನು ಹಾಗೂ ಶ್ರೀ ಮ.ನಿ.ಪ್ರ. ಎರಡನೆಯ ಮರುಳಶಂಕರ ಸ್ವಾಮಿಗಳ ಗದ್ದುಗೆಯನ್ನು ಶ್ರೀಕ್ಷೇತ್ರ ಗಚ್ಚಿನಮಠದಲ್ಲಿ ಕಾಣುತ್ತೇವೆ. ಆದರೂ ಸಹಿತ ಶ್ರೀ ಮ. ನಿ. ಪ್ರ. ಗುರುಶಾಂತ ಸ್ವಾಮಿಗಳ ಗದ್ದುಗೆಯ ಕಲ್ಯಾಣಮಂಟಪದ ಮಧ್ಯದಲ್ಲಿರುವದು ಎಂದು ಹಿರಿಯರು ಹೇಳುತ್ತಾರೆ. ಹಾಗೆಯೇ ಶ್ರೀ ಮುರುಘೇಂದ್ರ ಶಿವಯೋಗಿಗಳಿಂದ ಸ್ಥಾಪಿತವಾದ, ಶ್ರೀ ಪುರಾತನೇಶ್ವರ ಗುಡಿಯ ಹತ್ತಿರ ಅಥಣಿಯ ಹೊರಭಾಗದ ಗವಿಮಠದಲ್ಲಿ ಶ್ರೀ ಮ.ನಿ.ಪ್ರ. ಎರಡನೆಯ ಗುರುಶಾಂತ ಸ್ವಾಮಿಗಳ ಗದ್ದುಗೆಯನ್ನು ನೋಡಬಹುದು. ಅದರಂತೆ ಶ್ರೀ ಮ. ನಿ. ಪ್ರ. ಎರಡನೆಯ ಚನ್ನಬಸವ ಸ್ವಾಮಿಗಳ ಗದ್ದುಗೆಯು ಶ್ರೀ ಮಠದ ಮಹಾದ್ವಾರದ ಪ್ರವೇಶ ಮಾಡುವಲ್ಲಿ ಸದರಿನ ಮುಂದೆ ಗದ್ದುಗೆ ಇರುತ್ತದೆ ಎಂದು ಉಲ್ಲೇಖವಿದೆ. ಒಟ್ಟಿನಲ್ಲಿ ಇಂದು ಶ್ರೀ ಕ್ಷೇತ್ರ ಗಚ್ಚಿನಮಠದಲ್ಲಿ ೩, ಗವಿಮಠದಲ್ಲಿ ೨, ಹೊಸಗುಂಡದಲ್ಲಿ ೨, ಹಳೆಯ ಗುಂಡದಲ್ಲಿ ೧, ಮಠಾಧೀಶರ ಗದ್ದುಗೆಗಳು ಕಾಣುತ್ತೇವೆ. ಉಳಿದ ಗದ್ದುಗೆಗಳು ಎಲ್ಲಿವೆ ಎಂದು ನಿಖರವಾಗಿ ತಿಳಿದುಬರುವದಿಲ್ಲ. ಶ್ರೀ ಶಿವಯೋಗಿ ಎಂಬ ಗ್ರಂಥದಲ್ಲಿ ಗದ್ದುಗೆಗಳ ಕುರಿತಾಗಿ ಉಲ್ಲೇಖವಿದೆ. ಈ ಕುರಿತು ಇನ್ನೂ ಶೋಧ ನಡೆಯಬೇಕು.

## ಶ್ರೀ ಕ್ಷೇತ್ರ ಗಚ್ಚಿನಮಠದ ಪುಣ್ಯ ಪುರುಷರ ಪಕ್ಷಿ ನೋಟ

ಶ್ರೀ ಮುರುಘೇಂದ್ರ ಶಿವಯೋಗಿಗಳು ( ಕ್ರಿ.ಶ. ೧೮೩೬ ರಿಂದ ೧೯೨೧) ಶ್ರೀ ಮುರುಘೇಂದ್ರ ಶಿವಯೋಗಿಗಳು ಕರ್ನಾಟಕದ ಸಾಂಸ್ಕೃತಿಕ, ಧಾರ್ಮಿಕ ಕ್ಷೇತ್ರಕ್ಕೆ ಹಿನ್ನೆಲೆಯಾಗಿ ನಿಂತ ಪುಣ್ಯವ್ಯಕ್ತಿ ಎಂಬುದು, ಅವರ ಚರಿತ್ರೆಯಿಂದ ತಿಳಿದು ಬರುತ್ತದೆ. ಶ್ರೀ ಕ್ಷೇತ್ರ ಗಚ್ಚಿನಮಠದ ಹೆಸರು ಇತಿಹಾಸ ಪುಟದಲ್ಲಿ ಮೂಡಿರುವದು ಈ ತಪಸ್ವಿಗಳಿಂದಲೆ. ವೀರಶೈವ ಶಿವಯೋಗದ ಸಾಧಕರಲ್ಲಿ ಪ್ರಮುಖರು ಅಲ್ಲಮ ಪ್ರಭುದೇವ - ೧೨ನೇ ಶತಮಾನದಲ್ಲಿ, ಎಡೆಯೂರು ಶ್ರೀ ಸಿದ್ಧಲಿಂಗ ಸ್ವಾಮಿಗಳು - ೧೬ನೇ ಶತಮಾನದಲ್ಲಿ ೨೦ನೇ ಶತಮಾನದಲ್ಲಿ ವೀರಶೈವ ಧರ್ಮ ಆಚರಣೆ ತೋರಿಸಿದ ತತ್ವಜ್ಞಾನಿ ಅಥಣಿಯ ಶ್ರೀ ಮುರುಘೇಂದ್ರ ಶಿವಯೋಗಿಗಳು ಅಥಣಿ ತಾಲೂಕಿನ ಕೃಷ್ಣಾ ನದಿಯ ದಡದಲ್ಲಿರುವ ''ನದಿ ಇಂಗಳಗಾಂವ'' ಗ್ರಾಮದ ಭಾಗೋಜಿ ಮನೆತನ. ಇವರ ತಂದೆ ವೈದಿಕ ಸಂಸ್ಕಾರ ಹೊಂದಿದ ಸಾಧ್ವಿಕ ಶಿರೋಮಣಿ ''ರಾಚಯ್ಯ'' ಎಂಬುವರು ಮಾಹೇಶ್ವರ ಪರಿವಾರದವರು. ರಾಚಯ್ಯನವರ ಮಡದಿ ನೀಲಮ್ಮ ಇವರಿಗೆ ಐದು ಮಂದಿ ಅಣ್ಣ-ತಮ್ಮಂದಿರು, ಶಿವರುದ್ರಯ್ಯ, ಸಂಗನಬಸಯ್ಯ, ಗುರುಲಿಂಗಯ್ಯ, ದುಂಡಯ್ಯ, ಶಿವಲಿಂಗಯ್ಯ ಒಬ್ಬರು ಮಾತ್ರ ಹೆಣ್ಣು ಮಗಳು ಶಿವಭಾಯವ್ವ ಎಲ್ಲರೂ ಶಿವಸಂಸ್ಕೃತಿಯವರು, ಇವರಲ್ಲಿ ಗುರಲಿಂಗಯ್ಯನವರೆ ''ಶ್ರೀ ಮುರುಘೇಂದ್ರ ಶಿವಯೋಗಿಗಳು'' ಎಂದು ಪ್ರಸಿದ್ದರು.

ಶ್ರೀ ಮುರುಘೇಂದ್ರ ಶಿವಯೋಗಿಗಳು ಶಾಲಿವಾಹನ ಶಕೆ ೧೭೫೮ನೇ ದುರ್ಮುಖಿ ಸಂವತ್ಸರದ ವೈಶಾಖ ಮಾಸದಲ್ಲಿ ಅಂದರೆ ಕ್ರಿ.ಶ. ೧೮೩೬ ರಲ್ಲಿ ಜನಿಸಿದರು. ಗುರುಲಿಂಗಯ್ಯನವರು ಬಾಲ್ಯದಲ್ಲಿರುವಾಗ ಇವರ ತಂದೆ ರಾಚಯ್ಯನವರು ಪತ್ನಿ-ಪುತ್ರರೊಡನೆ ಅಥಣಿ ಶ್ರೀ ಗಚ್ಚಿನಮಠದ ಎರಡನೆಯ ಮುರುಳಶಂಕರ ಸ್ವಾಮಿಗಳಿಗೆ ಬಂದು ನಮಸ್ಕರಿಸಿ, ಗುರುಲಿಂಗಯ್ಯನನ್ನು ಶ್ರೀ ಮಠಕ್ಕೆ ಅರ್ಪಿಸಿದರು. ಶ್ರೀ ಗುರುಲಿಂಗಯ್ಯನವರು ಅಥಣಿ ತಾಲೂಕಿನ ತೆಲಸಂಗದ ಮಠದ ಶ್ರೀ ಶಿವಬಸವ ದೇಸಿಕರ ಹತ್ತಿರ ವಚನಾಧ್ಯಯನ, ವೇದಾಗಮ ವಿದ್ಯಾಭ್ಯಾಸ ಕೈಗೊಂಡರು. ಆದರೆ ಕುಷ್ಠರೋಗ ಪೀಡಿತರಾದ ಕಾರಣ ಶ್ರೀ ಗುರುವರ್ಯರನ್ನು ಉಪಚರಿಸಿ, ಅವರ ಸೇವೆ ಮಾಡಿ ಕುಷ್ಠರೋಗದಿಂದ ಮುಕ್ತಗೊಳಿಸಿದರು. ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಬಿಜಾಪುರ ತಾಲೂಕಿನ ಮಮದಾಪೂರ ಗ್ರಾಮದ ಮುರುಘ ಶಿವಯೋಗಿಗಳ ಹತ್ತಿರ ವಿದ್ಯಾಭ್ಯಾಸ ಕೈಕೊಂಡರು. ಇದೇ ಸಂದರ್ಭದಲ್ಲಿ ಎರಡನೆಯ ಮುರಳುಶಂಕರ ಸ್ವಾಮಿಗಳು ಮಮದಾಪೂರದಿಂದ ಗುರುಲಿಂಗಯ್ಯನನ್ನು ಅಥಣಿಗೆ ಕರೆಯಿಸಿದರು. ಎರಡನೆಯ ಗುರುಗಳಾದ ಶ್ರೀ ಗುರುಶಾಂತ ಸ್ವಾಮಿಗಳು ಇವರಿಗೆ ಮುರುಘ ಎಂದು ಅಭಿದಾನ ನಾಮ ನೀಡಿದರು. ''ಮುರುಘ'' ಎಂದರೆ ಶಿವನ ಪುತ್ರ ಕುಮಾರ ಸ್ವಾಮಿಯ ಹೆಸರು. ಇದೇ ಹೆಸರಿನ ಪುರಾತನ ಓರ್ವರು ಇದ್ದರು. ಶ್ರೀ ಮುರುಘೇಂದ್ರ ಶಿವಯೋಗಿಗಳು ೩೧ ವರ್ಷಗಳ ಕಾಲ ಸಂಪೂರ್ಣ ಭಾರತವನ್ನು ಕಾಲ್ನಡಿಗೆಯಿಂದ ದೇಶ ಸಂಚಾರ ಗೈದರು. ಹಳ್ಳಿಗೆ ರಾತ್ರಿ ಪಟ್ಟಣಕ್ಕೆ ಪಂಚರಾತ್ರಿ ಎಂಬ ಸನ್ಯಾಸಿ ಪಾಲಿಸುವ ನಿಯಮದಂತೆ, ಅನೇಕ ಪುಣ್ಯ ಕ್ಷೇತ್ರಗಳ ದರ್ಶನದೊಂದಿಗೆ, ಅನೇಕ ಜನರ ಸಂಪರ್ಕ ಪಡೆದರು. ಶ್ರೀ ಶಿವಯೋಗಿ ಮುರುಘೇಂದ್ರ ಸ್ವಾಮಿಗಳು ದೇಶ ನೋಡಿ ಕೋಶ ಓದಿ ತಮ್ಮ ಜ್ಞಾನವನ್ನು ಹೆಚ್ಚಿಸಿಕೊಂಡರು. ಗೋಕಾಕದ ಅಂಕಲಿಯಿಂದ ಅಥಣಿಗೆ ದಯಮಾಡಿಸಿದರು. ಅಥಣಿಯ ಶ್ರೀ ಮಠಕ್ಕೆ ಮರಳುವಷ್ಟರಲ್ಲಿ ಶ್ರೀ ಕ್ಷೇತ್ರ ಗಚ್ಚಿನಮಠದ ಅಧಿಕಾರ ಅವರಿಗಾಗಿ ಕಾದಿತ್ತು. ಮಹಾಮಹಿಮರಾದ ಶ್ರೀ ಶಿವಯೋಗಿಗಳು ಬ್ರಹ್ಮ ಪದವಿ, ಇಂದ್ರಪದವಿ ಮತ್ತಾವ ಪದವಿಯನ್ನೊಲ್ಲದ, ಅಥಣಿಯ ಗಚ್ಚಿನಮಠಕ್ಕೆ ಮಠಾಧಿಪತಿಯಾಗುವ ಅವಕಾಶ ಬಂದಾಗಲೂ ನಿರಾಕರಿಸಿ ತ್ಯಾಗಮಾಡಿದರು. ಶ್ರೀ ಮಠದಲ್ಲಿ ಅಭ್ಯಾಸ ಮಾಡುತ್ತಿದ್ದ ಭಕ್ತ ವರ್ಗದ ಶ್ರೀ ಸಿದ್ಧಲಿಂಗಪ್ಪನವರನ್ನು ಪೀಠಾಧಿಪತಿಯನ್ನಾಗಿ ಮಾಡಿ ಭಕ್ತರ ಮನಸೂರೆಗೊಂಡರು.

ಪ್ರತಿನಿತ್ಯ ಶಿವಶರಣರ ಪುರಾಣಗಳನ್ನು, ಶಿವಾಗಮಗಳನ್ನು, ಬಸವಣ್ಣನವರ ಹಾಗೂ ಇತರ ಶರಣರ ವಚನಗಳನ್ನು ಭಕ್ತಿಯಿಂದ ಓದುತ್ತಿದ್ದರು. ಬಸವಣ್ಣನವರ ವಚನಗಳನ್ನು ಅಪ್ಪನವರ ವಚನಗಳು ಎಂದು ಕರೆಯುತ್ತಿದ್ದರೇ ಹೊರತು, ''ಅಣ್ಣ'' ಎಂಬ ಪದ ಬಳಸುತ್ತಿರಲಿಲ್ಲ. ಬಸವ ಅನುಯಾಯಿಗಳಾಗಿ ಬಸವತತ್ವದ ಪಥದಂತೆ ನಡೆದು ತೋರಿಸಿದ ಹರಿಕಾರರು.

ಅವರ ಭಾವ ಕೋಮಲವಾದ ತ್ಯಾಗದ ಭಾವವಾಗಿತ್ತು. ಪ್ರತಿನಿತ್ಯ ಪೂಜೆಗೆ ಪತ್ರಿ - ಪುಷ್ಪಗಳನ್ನು ತೆಗೆದುಕೊಳ್ಳಬೇಕಾದರು ಭಕ್ತಿಯಿಂದ, ದೈನ್ಯಭಾವದಿಂದ, ಕೋಮಲವಾದ ಸಸ್ಯಗಳಿಗೆ ನೋವಾಗಬಾರದು ಎಂದು ನಿಧಾನವಾಗಿ ತೆಗೆದುಕೊಳ್ಳುತ್ತಿದ್ದರು. ತ್ರಿಕಾಲ ಇಷ್ಟಲಿಂಗ ಪೂಜೆ, ಗುರುಗಳಲ್ಲಿ ನಿಷ್ಠೆ, ಭಕ್ತರನ್ನು, ಶಿಷ್ಯರನ್ನು ಆತ್ಮೀಯತೆಯಿಂದ ಕಂಡವರು. ಧನ-ಕನಕಾದಿಗಳಿಗೆ ಬೆನ್ನಟ್ಟಿದವರಲ್ಲ. ಒಂದು ಸಲ ಶಿವಯೋಗಿಗಳು ಚೇಳು,! ಚೇಳು। ಎಂದು ಕೂಗಿದಾಗ, ಹತ್ತಿರದಲ್ಲಿಯೇ ಇದ್ದ ಶಿಷ್ಯರಾದ ಧಾರವಾಡದ ಮುರುಘಾಮಠದ

ಮೃತ್ಯುಂಜಯ ಸ್ವಾಮಿಗಳು ಎಲ್ಲಿ? ಎಂದು ಕೇಳಿದಾಗ, ನಾಣ್ಯವನ್ನು ತೋರಿಸಿದರು. ಅದನ್ನು ದೂರ ಎಸೆಯುವಂತೆ ಹೇಳಿದರು.

ಒಂದು ಸಲ ಶಿರಸಂಗಿಯ ಲಿಂಗರಾಜರು ತಮಗೆ ಮಕ್ಕಳಿಲ್ಲದ ಕಾರಣ ದೇಸಗತಿಯ ಆಸ್ತಿಯನ್ನು ಶ್ರೀ ಶಿವಯೋಗಿಗಳಿಗೆ ಅರ್ಪಿಸಲು ಗಚ್ಚಿನಮಠಕ್ಕೆ ಆಗಮಿಸಿದರು. ಆದರೆ ಶಿವಯೋಗಿಗಳು ಮಠಕ್ಕೆ ಈ ದೇಸಗತಿ ಆಸ್ತಿ ಬೇಡ, ಇದು ವಿದ್ಯೆಗಾಗಿ ಉಪಯೋಗವಾದಲ್ಲಿ, ವಿದ್ಯೆ ಕಲಿತ ಮಕ್ಕಳು ನಿಮ್ಮನ್ನು ಹಾರೈಸುವರು ಎಂದು ಹೇಳಿದರು. ಅದರಂತೆ ಅರಟಾಳ ರುದ್ರಗೌಡರು, ಶ್ರೀ ಬಸಲಿಂಗಪ್ಪಾ ಸಿಗ್ಗಲಿ, ಮೊದಲಾದ ಏಳು ಜನರು ಕೂಡಿಕೊಂಡು ಟ್ರಸ್ಟ ಮಾಡಿ, ಅದರ ನೇತೃತ್ವದಲ್ಲಿ ಬಡ ವಿದ್ಯಾರ್ಥಿಗಳ ಸಹಾಯಾರ್ಥ ಧನವಿನಿಯೋಗಿಸಿದರು. ಕೆ. ಎಲ್.ಇ. ಸಂಸ್ಥೆಗೂ ಸಹ ಲಿಂಗರಾಜರು ತಮ್ಮ ಸಂಪತ್ತನ್ನು ಸಮರ್ಪಿಸುವಂತೆ ಪ್ರೇರೆಪಿಸಿದವರು, ಘನವೈರಾಗ್ಯನಿಧಿ ಅಥಣಿಯ ಶ್ರೀ ಮುರುಘೇಂದ್ರ ಶಿವಯೋಗಿಗಳು.

ಲೋಕಮಾನ್ಯ ಬಾಲಗಂಗಾಧರ ತಿಲಕರು ದಿನಾಂಕ : ೧೫-೦೧-೧೯೧೭ ರಲ್ಲಿ ಅಥಣಿಗೆ ಬಂದಾಗ ಶ್ರೀ ಗಚ್ಚಿನಮಠಕ್ಕೆ ಹೋಗಿ ಶಿವಯೋಗಿಗಳ ದರ್ಶನ ಪಡೆಯುತ್ತಾರೆ. ಬ್ರಿಟೀಷ ಆಡಳಿತ, ಭಾರತದ ದಾಸ್ಯ, ಸ್ವರಾಜ್ಯ ಪಡೆವ ಬಗೆಗಳನ್ನು ಅವರು ಶಿವಯೋಗಿಗಳೊಂದಿಗೆ ಚರ್ಚಿಸುತ್ತಾರೆ. ಆಗ ಶಿವಯೋಗಿಗಳು ಲೋಕಮಾನ್ಯರೆ, ಮಾಮರ ಹಚ್ಚಿದವರಿಗೆ ಅದರ ಫಲ ದೊರೆಯಲಾರದು. ಆದ್ದರಿಂದ ಆ ಮರದ ಫಲವು ಮುಂದಿನವರಿಗೆ ದೊರೆಯುವದು, ನಿಮ್ಮ ಹೋರಾಟದ ಫಲ ಮುಂದಿನವರಿಗೆ ಎಂದು ಹೇಳಿದರು. ಈ ಘಟನೆ ಅವರು ಹೇಳಿದಂತೆ ನಡೆಯಿತು.

ಪೂಜ್ಯಶ್ರೀ ಶಿವಯೋಗಿಗಳು ವಾಯು ವಿಹಾರಕ್ಕಾಗಿ ಹೋಗುವಾಗ ಅಥಣಿ - ಸತ್ತಿ ರಸ್ತೆಯ ಪಕ್ಕದ ಹೊಲದಲ್ಲಿ ವಿಶ್ರಮಿಸುತ್ತಿರುವ ಸಂದರ್ಭದಲ್ಲಿ ಹೊಲದ ಮಾಲಿಕ ಶೇಟವಾಜಿಯ ಮುಂದೆ ಇಲ್ಲಿ ಶಾರದೆಯ ವಿದ್ಯಾಲಯವಾಗುವದು, ಅನೇಕ ಮಕ್ಕಳು ವಿದ್ಯಾಭ್ಯಾಸ ಮಾಡುವರು ಎಂದು ಹೇಳಿದ್ದರು. ಮುಂದೆ ೧೯೫೨ ರಲ್ಲಿ ಕೆ.ಎಲ್.ಇ. ಸಂಸ್ಥೆಯವರು ಶೇಟವಾಜಿಯವರ ಹೊಲವೇ ಉತ್ತಮ ಜಾಗವೆಂದು ಶಿಫಾರಸ್ಸು ಮಾಡಿ ೨೭ ಎಕರೆ ಸ್ಥಳವನ್ನು ಶೇಟವಾಜಿಯವರಿಂದ ಪಡೆದರು. ಹಣ ಪಡೆಯಲು ನಿರಾಕರಿಸಿದ ಶೇಟವಾಜಿಯವರಿಗೆ ೨೦೦೦ ರೂಪಾಯಿಗಳನ್ನು ಆಶೀರ್ವಾದ ಪೂರ್ವಕವಾಗಿ ನೀಡಿದರು ಎಂಬುದು ಶಿವಯೋಗಿಗಳ ಚರಿತ್ರೆಯಲ್ಲಿ ಕಂಡು ಬರುತ್ತದೆ. ಇದೇ ಸ್ಥಳದಲ್ಲಿ ಇಂದು ಕೆ.ಎಲ್.ಇ. ಸಂಸ್ಥೆ ಮಕ್ಕಳಿಗೆ ವಿದ್ಯಾಭ್ಯಾಸ ನೀಡುತ್ತಿದೆ. ಇಂದು ಶ್ರೀ ಶಿವಯೋಗಿಗಳ ಹೆಸರನ್ನು ಮಹಾವಿದ್ಯಾಲಯಕ್ಕೆ ಇಟ್ಟು ಋಣಭಾರ ಕಡಿಮೆಮಾಡಿಕೊಂಡಿದ್ದಾರೆ. ಸಂಸ್ಥೆಗೆ ಇದು ಶಿವಯೋಗಿಗಳ ಮೇಲಿನ ನಿಷ್ಠೆ ತೋರಿಸಿಕೊಡುತ್ತದೆ.

''ವಚನ ಪಿತಾಮಹ'' ಎನಿಸಿಕೊಳ್ಳಬೇಕಾದರೆ ಸುಲಭದ ಮಾತಲ್ಲ, ಶ್ರೀ ಫಕೀರಪ್ಪಾ ಜಿ. ಹಳಕಟ್ಟಿಯವರು ವಕೀಲರಾಗಿದ್ದಾಗ ಶ್ರೀ ಗಚ್ಚಿನಮಠಕ್ಕೆ ಬಂದು ಅವರ ಅಪ್ಪಣೆಯಂತೆ, ವಚನ ಸಂಗ್ರಹ ಹಾಗೂ ಸಂಪಾದನೆ ಕೈಕೊಂಡು ''ವಚನ ಪಿತಾಮಹ'' ಎನಿಸಿದರು. ''ಕರ್ನಾಟಕದ ಗಾಂಧಿ'' ಎಂದು ಹೆಸರು ಮಾಡಿದ ಶ್ರೀ ಹರ್ಡೇಕರ ಮಂಜಪ್ಪನವರು ಅಸ್ಪೃಶ್ಯ ಜನಾಂಗದವರು. ಅವರಿಗೆ ಲಿಂಗ ದೀಕ್ಷೆಯನ್ನು ಶಿವಯೋಗಿಗಳು ದಯಪಾಲಿಸಿದರು, ಎಂದು ಶ್ರೀಮಂಜಪ್ಪನವರ ಆತ್ಮಚರಿತ್ರೆ ಉಲ್ಲೇಖಿಸುತ್ತದೆ. ನಮ್ಮ

ದೇಶದ ಉಪರಾಷ್ಟ್ರಪತಿ ಹಾಗೂ ಹಂಗಾಮಿ ರಾಷ್ಟ್ರಪತಿಯಾಗಿದ್ದ ಶ್ರೀಮಾನ್ ಬಿ.ಡಿ. ಜತ್ತಿಯವರು, ಇಷ್ಟೊಂದು ರಾಷ್ಟ್ರದ ಉನ್ನತ ಸ್ಥಾನ ಪಡೆಯಲು ಚಿಕ್ಕವರಿರುವಾಗ ಶ್ರೀ ಶಿವಯೋಗಿಗಳಿಂದ ಆಶೀರ್ವಾಣಿ ಆಗಿತ್ತು ಎಂಬುದು ಜತ್ತಿಯವರ ಜೀವನ ಚರಿತ್ರೆಯಿಂದ ತಿಳಿದು ಬರುತ್ತದೆ.

ಶ್ರೀ ಶಿವಯೋಗಿಗಳ ಆಶೀರ್ವಾದದಿಂದ ಇಂದು ಅನೇಕ ಮಹನೀಯರು ಉನ್ನತ ಸ್ಥಾನ ಪಡೆದಿದ್ದಾರೆ. ಹಲವು ಪೂಜ್ಯರು ಶ್ರೀಗಳ ಆಶೀರ್ವಾದದಿಂದ ಮಠಾಧಿಪತಿಯಾಗಿ, ಸಮಾಜ ಸೇವೆ ಕೈಕೊಂಡಿದ್ದಾರೆ. ಹಲ್ಯಾಳದ ಶ್ರೀ ಮ. ನಿ. ಪ್ರ. ಗುರುಸಿದ್ಧ ಮಹಾಸ್ವಾಮಿಗಳು ಅನೇಕ ವರ್ಷಗಳವರೆಗೆ ಅವರ ಸೇವೆಗೈದು, ಶ್ರೀ ಶಿವಯೋಗಿಗಳ ಹತ್ತಿರ ವಿದ್ಯಾಭ್ಯಾಸ ಕೈಕೊಂಡರು. ಧಾರವಾಡದ ಮುರುಘಾಮಠದ ಅಧಿಪತಿಗಳಾದ ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳು, ಶ್ರೀ ಮಠದಲ್ಲಿ ಅಭ್ಯಾಸಗೈದು ಧಾರವಾಡದಲ್ಲಿ ಬಡ ವಿದ್ಯಾರ್ಥಿಗಳಿಗಾಗಿ ಉಚಿತ ಪ್ರಸಾದ ನಿಲಯ ಪ್ರಾರಂಭಿಸಿದರು. ಅಲ್ಲಿನ ಅನೇಕ ವಿದ್ಯಾರ್ಥಿಗಳು ಇಂದು ಉನ್ನತ ಸ್ಥಾನದಲ್ಲಿದ್ದಾರೆ. ಶ್ರೀಶೈಲದ ವಾಗೀಶ ಪಂಡಿತರಾಧ್ಯರು ಶ್ರೀ ಗಚ್ಚಿನಮಠದಲ್ಲಿಯೇ ವಿದ್ಯಾಭ್ಯಾಸ ಮಾಡಿ, ಶ್ರೀಶೈಲ ಜಗದ್ಗುರು ಪೀಠ ಹೊಂದಿದರು. ಇವರು ಬರೆದಿರುವ ''ಶ್ರೀ ಶಿವಯೋಗಿ ಸುಪ್ರಭಾತ'' ಬಹು ಪ್ರಸಿದ್ಧವಾಗಿದೆ. ಚಿತ್ರದುರ್ಗದ ಶ್ರೀ ಜಯದೇವ ಮಹಾಸ್ವಾಮಿಗಳು ಸವದತ್ತಿಯ ಕಲ್ಮಠದಲ್ಲಿ ಬಸವ ಪುರಾಣ ಪ್ರವಚನ ಮಾಡುವಾಗ ''ನೀವು ಗುರುವಿಗೆ ಗುರುವಾಗುವಿರಿ'' ಎಂಬ ಶ್ರೀವಾಣಿ ಆಶೀರ್ವಾದದಿಂದ ಮಹಾಸ್ವಾಮಿಗಳಾದರು. ಶ್ರೀ ಜಯವಿಭವ ಮಹಾಸ್ವಾಮಿಗಳು ಚಿತ್ರದುರ್ಗ, ಶ್ರೀ ಶಿವಲಿಂಗ ಮಹಾಸ್ವಾಮಿಗಳು ಚಿತ್ರದುರ್ಗ ಹಾಗೂ ಶ್ರೀ ಮಲ್ಲಿಕಾರ್ಜುನ ಜಗದ್ಗುರುಗಳು ಇವರೂ ಸಹ ತಪಸ್ವಿಗಳ ಕೃಪೆಗೆ ಪಾತ್ರರಾಗಿದ್ದರು. ಪೂಜ್ಯ ಮೌನಮುನಿ ಶ್ರೀ ಮರುಳಶಂಕರ ದೇವರು ಮಗು ಇರುವಾಗ ಡೋಗಿ ಹುಣ್ಣಿನಿಂದ ಬಳಲುತ್ತಿದ್ದರು. ಶ್ರೀ ಶಿವಯೋಗಿಗಳ ಕೃಪಾಶೀರ್ವಾದದಿಂದ ಪುನರ್ ಜನ್ಮ ಪಡೆದರು. ಅವರನ್ನು ಇಂದಿಗೂ ಶ್ರೀ ಗಚ್ಚಿನಮಠದಲ್ಲಿ ಕಾಣುತ್ತೇವೆ.

ಪೂಜ್ಯ ಮಹಾತಪಸ್ವಿ ಶಿವಯೋಗಿಗಳ ತಪಸ್ಸನ್ನು ನಮ್ಮ ಕರ್ನಾಟಕದ ಜನತೆ ಕಂಡು ಬೆರಗಾಗಿದ್ದಾರೆ. ಅದಕ್ಕಾಗಿಯೇ ಹುಬ್ಬಳ್ಳಿಯ ಶ್ರೀ ಸಿದ್ಧಾರೂಢರು '' ಆಚರಣೆಯಲ್ಲಿ ಶ್ರೀ ಶಿವಯೋಗಿಗಳೇ ಶ್ರೇಷ್ಠರು ಶ್ರೀ ಶಿವಯೋಗಿಗಳು ಶಿವಸ್ವರೂಪಿಗಳು'' ಎಂದು ಹೇಳುತ್ತಿದ್ದರು. ''ಯೋಗಿಗಳ ಇರುವಿಕೆ ಯೋಗಿಗಳಿಗೆ ಮಾತ್ರ ಗೊತ್ತಾಗುತ್ತದೆ''. ಶಿವಯೋಗಿಗಳ ವ್ಯಕ್ತಿತ್ವವನ್ನು ಶ್ರೀ ಸಿದ್ಧಾರೂಢರು ಬಲ್ಲಿದರಾಗಿದ್ದರು ಎಂಬ ಮಾತು ಚರಿತ್ರೆಯಿಂದ ತಿಳಿಯುತ್ತದೆ.

ಪೂಜ್ಯ ಶ್ರೀ ಶಿವಯೋಗಿಗಳು ಜಾತಿ, ಮತ, ಪಂಥ ಎಂಬ ಭೇದ-ಭಾವ ಹೊಂದಿದವರಲ್ಲ. ಒಂದು ಸಲ ಮುಸ್ಲಿಂ ಹುಡುಗನು ಕಂಚಿಕಾಯಿಯನ್ನು ಪಡೆಯಲು ಶ್ರೀ ಮಠದಲ್ಲಿ ಬಂದಾಗ, ಆತನನ್ನು ಶ್ರೀ ಶಿವಯೋಗಿಗಳು ಕರೆದರು. ಆದರೆ ಬಯ್ಯುವರೆಂಬ ಭಯದಿಂದ ಓಡಿದನು, ಆದರೂ ಆತನನ್ನು ಕರೆಯಿಸಿ, ಸಕ್ಕರೆ ಕೊಟ್ಟು ಕಳುಹಿಸಿದರು. ಇದು ಅವರ ಜಾತಿ, ಮತ, ಪಂಥ ಎನ್ನುವ ಭೇದ-ಭಾವ ಇರಲಿಲ್ಲವೆಂಬುದನ್ನು ತೋರಿಸಿಕೊಡುತ್ತದೆ.

**ಶ್ರೀ ಸಿದ್ಧಲಿಂಗ ಚರವರೇಣ್ಯರು :**

ಶ್ರೀ ಗಚ್ಚಿನಮಠದ ೯ನೆಯ ಮಠದ ಒಡೆಯರಾದ ಇವರು ಅಥಣಿಯಲ್ಲಿರುವ ವೀರಶೈವ ಭಕ್ತವರ್ಗದ ಸದ್ಭಕ್ತ ಸಂಪನ್ನರು, ಸಾತ್ವಿಕ ಜೀವಿಗಳು, ಆಚಾರ ಸಂಪನ್ನರಾದ ಶ್ರೀ ಮಹಾಲಿಂಗಪ್ಪಾ ಢವಳೇಶ್ವರ, ತಾಯಿ ಬಸಮ್ಮ ಇವರ ಎರಡನೆಯ ಮಗುವಾಗಿ ಜನಿಸಿದರು.

ಚಿಕ್ಕವರಿರುವಾಗ ತಲೆಯಲ್ಲಿ ಅನೇಕ ಹುಣ್ಣುಗಳಾದವು, ರೋಗ ವಾಸಿಯಾದರೆ ಶ್ರೀ ಗಚ್ಚಿನಮಠಕ್ಕೆ ಸಿದ್ಧಲಿಂಗರನ್ನು ಅರ್ಪಿಸುತ್ತೇನೆಂದು ಇವರ ತಂದೆ-ತಾಯಿಗಳು ಹರಕೆ ಹೊತ್ತಿದ್ದರು.

ಇದರಿಂದಾಗ ಎರಡನೆಯ ಶ್ರೀ ಗುರುಶಾಂತ ಸ್ವಾಮಿಗಳಲ್ಲಿ ಇವರನ್ನು ಶ್ರೀ ಮಠಕ್ಕೆ ಅರ್ಪಿಸಿದರು. ಶ್ರೀ ಫಣಿಯಪ್ಪ ಶಾಸ್ತ್ರಿಗಳವರಿಂದ ವಿದ್ಯೆ ಕಲಿತು, ಹಾವೇರಿಯಲ್ಲಿ ಶಿವಾನುಭವ ಶಾಸ್ತ್ರದ ಅಧ್ಯಯನ, ಆಗಮ ಪುರಾಣಗಳ ಆಳವಾದ ಅಭ್ಯಾಸ ಮಾಡಿದರು. ಸ್ವತಃ ಶ್ರೀ ಶಿವಯೋಗಿಗಳು ಶ್ರೀ ಮಠದ ಅಧಿಕಾರ ಸ್ಥಾನ ಸ್ವೀಕರಿಸದೆ ಇವರನ್ನು ಶ್ರೀ ಮಠದ ಅಧಿಪತಿಗಳನ್ನಾಗಿ ತಮ್ಮ ಗುರುಗಳಿಗೆ ನೇಮಿಸಲು ಸೂಚಿಸಿದರು. ಶ್ರೀ ಗಚ್ಚಿನ ಮಠದಲ್ಲಿ ಶಿವಯೋಗಿಗಳ ಮನಸ್ಸಿಗೆ ತೃಪ್ತಿಯಾಗುವಂತೆ ಎಲ್ಲ ಕಾರ್ಯಗಳನ್ನು ದಾಸೋಹಂಭಾವದಿಂದ ನಡೆಯಿಸುತ್ತಿದ್ದರು. ಶ್ರೀ ಶಿವಯೋಗಿಗಳು ಜ್ಞಾನಶಕ್ತಿ ರೂಪರಾದರೆ, ಶ್ರೀ ಸಿದ್ಧಲಿಂಗ ಸ್ವಾಮಿಗಳು ಕ್ರಿಯಾಶಕ್ತಿ ರೂಪರಾಗಿದ್ದರು. ಇವರಿರ್ವರಲ್ಲಿ ಜ್ಞಾನ ಮತ್ತು ಕ್ರಿಯೆ ಸಮನ್ವಯ ಹೊಂದಿದ ತತ್ವ ಕಾಣುತ್ತೇವೆ. ಇವರಿಬ್ಬರೂ ಒಂದೇ ತತ್ವದ ಎರಡು ರೂಪವಾಗಿದ್ದರು.

ಪ್ರತಿ ವರುಷ ಶ್ರೀ ಶಿವಯೋಗಿಗಳ ಅಪ್ಪಣೆ ಪಡೆದು ಉಳವಿ, ಗೋಕರ್ಣ ಮೊದಲಾದ ತೀರ್ಥ ಕ್ಷೇತ್ರಗಳಿಗೆ ಯಾತ್ರೆ ಕೈಕೊಳ್ಳುತ್ತಿದ್ದರು. ಗೋಕರ್ಣಕ್ಕೆ ಹೋದಾಗ ಪ್ರಸಾದ ವ್ಯವಸ್ಥೆಯಲ್ಲಿ ಭಕ್ತರಿಗೆ ಕೊರತೆ ಉಂಟಾಗುವದೆಂದು ಚಿಂತಿಸಿ, ಶ್ರೀ ಸಿದ್ಧಲಿಂಗ ಶ್ರೀಗಳು ಶ್ರೀ ಶಿವಯೋಗಿಗಳನ್ನು ನೆನಪಿಸಿದಾಗ ಪ್ರಸಾದ ವ್ಯವಸ್ಥೆಯಲ್ಲಿ ಅಕ್ಷಯವಾಯಿತು. ಹೀಗೆ ಅವರಿರ್ವರು ಒಂದೇ ನಾಣ್ಯದ ಎರಡು ಮುಖಗಳಾಗಿದ್ದರು. ಗಚ್ಚಿನಮಠವನ್ನು ದಾಸೋಹ ಮಠವಾಗಿಸಿದರು. ಜಂಗಮ ತೃಪ್ತಿ, ಸಂಗಮನಿಗೆ ಸಮರ್ಪಿತ ಭಾವ ಅವರದಾಗಿತ್ತು.

ಇವರು ಭಕ್ತ ಕುಟುಂಬಿಗಳು, ಇವರ ಅನೇಕ ಶಿಷ್ಯರು ಕರ್ನಾಟಕ, ಮಹಾರಾಷ್ಟ್ರ , ಆಂಧ್ರ ರಾಜ್ಯಗಳಲ್ಲಿ ಉಜ್ವಲ ಭವಿಷ್ಯ ಪಡೆದಿದ್ದಾರೆ. ಹಲ್ಯಾಳದ ಶ್ರೀ ಗುರುಸಿದ್ಧ ಮಹಾಸ್ವಾಮಿಗಳು, ಶ್ರೀ ಮ.ನಿ. ಪ್ರ. ಜಗದ್ಗುರು ಜಯದೇವ, ಜಯವಿಭವ ಹಾಗೂ ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿಗಳು ಚಿತ್ರದುರ್ಗ, ಶ್ರೀ ನಿಡಸೋಸಿ ಸಂಸ್ಥಾನ ಮಠಾಧ್ಯಕ್ಷರು, ಧಾರವಾಡದ ಶ್ರೀ ಮ.ನಿ.ಪ್ರ. ಮೃತ್ಯುಂಜಯ ಮಹಾಸ್ವಾಮಿಗಳು , ಸಿದ್ಧಗಂಗೆಯ ಇಂದಿನ ಪೀಠಾಧಿಪತಿಗಳಾದ ಶ್ರೀ ಮ.ನಿ.ಪ್ರ. ಶಿವಕುಮಾರ ಮಹಾಸ್ವಾಮಿಗಳು ಅಲ್ಲದೇ ಅಥಣಿ, ರಾಣೆಬೆನ್ನೂರು, ಬೆಂಗಳೂರು, ರಾಯಚೂರ, ಬ್ಯಾಡಗಿ, ಮಹಾಲಿಂಗಪೂರ, ಹಾವೇರಿ, ಬಸವನ ಬಾಗೇವಾಡಿ, ಬಿಳ್ಳೂರ, ಕೊಡಗಿನ ಅನೇಕ ಮಠಾಧೀಶರಿಗೆ ಹಾಗೂ ಭಕ್ತ ಪರಿವಾರದವರಿಗೆ ಅನುಗ್ರಹ ನೀಡಿ ಗುರುಮಂತ್ರ ಉಪದೇಶಿಸಿದರು. ಭಕ್ತ ಪರಿವಾರದವರಿಗೆ ಅನುಗ್ರಹ ನೀಡಿ ಗುರುಮಂತ್ರ ಉಪದೇಶಿಸಿದರು. ಭಕ್ತ ವರ್ಗದಲ್ಲಿ ಬ್ಯಾಡಗಿಯ ಕಬ್ಬೂರ ದಾನಪ್ಪನವರು ಹಾಗೂ

ಗುರುವರ್ಗದಲ್ಲಿ ಸಿದ್ಧಗಂಗೆಯ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಜಗತ್ಪ್ರಸಿದ್ಧರಾಗಿರುವರು. ಇದಕ್ಕೆಲ್ಲ ಕಾರಣ ಅವರ ಕೃಪಾಶೀರ್ವಾದ. ಶ್ರೀ ಸಿದ್ಧಲಿಂಗ ಚರವರೇಣ್ಯರಲ್ಲಿ ಪ್ರಸಾದ ಹಸ್ತ, ಪರುಷ ಹಸ್ತ, ಪರುಷ ನೇತ್ರ, ಘನ ವೈರಾಗ್ಯ , ಲಿಂಗ ಪೂಜೆಯ ನಿಷ್ಠೆ ಮಾತ್ರ ಹೃದಯದ ಸವಿನೆನಹುಗಳು ಇದ್ದವು. ಸೋಲಾಪುರದಲ್ಲಿ ಶ್ರೀಮಂತ ಕಾಡಾದಿಯವರು ಸಿದ್ದಲಿಂಗಪ್ಪಗಳವರ ಆತ್ಮೀಯ ಭಕ್ತರು, ಆದ್ದರಿಂದ ಪೂಜ್ಯ ಶ್ರೀಗಳ ಅಮೃತ ಹಸ್ತದಿಂದ ಉದ್ದಿಮೆಗಳನ್ನು ಪ್ರಸಾದ ನಿಲಯ , ಹೈಸ್ಕೂಲು, ಔಷಧಾಲಯ, ಕಾಲೇಜುಗಳನ್ನು ಪ್ರಾರಂಭಿಸಿದರು. ಇವೆಲ್ಲವೂ ಅಂದು ಜಗತ್ಪ್ರಸಿದ್ಧವಾದವು. ಸಿದ್ದಲಿಂಗಪ್ಪಗಳ ಭಾವದಲ್ಲಿ ಯಾವ ಕಾಲಕ್ಕೂ ಶ್ರೀ ಶಿವಯೋಗಿಗಳ ನೆನಹು ಇರುತ್ತಿತ್ತು. ಇವರಿರ್ವರು ತಮ್ಮ ಆತ್ಮಗಳನ್ನು ಒಂದು ಮಾಡಿದ ಮಹಾಮಹಿಮರು. ಹೀಗೆ ಸಿದ್ಧಲಿಂಗ ಮಹಾಸ್ವಾಮಿಗಳು ಅನಂತ ಲೀಲೆಗಳನ್ನು ಎಸಗಿ ಎಂಭತ್ತು ವರ್ಷ ಬಾಳಿ ಬೆಳಗಿದ ಮಹಾದಾಸೋಹ ಮೂರ್ತಿಗಳಾಗಿ, ಶ್ರೀ ಗಚ್ಚಿನಮಠವನ್ನು ಬಸವಣ್ಣನವರ ಮಹಾಮನೆಯಂತೆ ಕಂಗೊಳಿಸಲು ಕಾರಣಿಕ ಪುರುಷರು. ಇಂತಹ ದಿವ್ಯ ಚೇತನ ಕ್ರಿ.ಶ. ೧೯೩೮ ರ ಭುಧವಾರ ಮಾಘವದ್ಯ ಅಮವಾಸ್ಯೆಯ ದಿವಸ ರಾತ್ರಿ ೯-೦೦ ಗಂಟೆಗೆ ''ಲಿಂಗವನೋಡಿ, ಲಿಂಗದಲ್ಲಿ ಬೆರೆದು, ಲಿಂಗವೇ ಆದರು''.

ಶ್ರೀ ಮ.ನಿ.ಪ್ರ. ಮೂರನೆಯ ಚನ್ನಬಸವ ಮಹಾಸ್ವಾಮಿಗಳು :

ಹತ್ತನೆಯ ಮಠಾಧೀಶರಾದ ಶ್ರೀ ಚನ್ನಬಸವ ಮಹಾಸ್ವಾಮಿಗಳು, ಶಿವಯೋಗಿಗಳ ಮತ್ತು ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳ ಶಿಷ್ಯರು. ಇವರು ತಿಕೋಟಾ ಗ್ರಾಮದ ಕೊಳಲ ಮಠದ ಶಿವಪೂಜಯ್ಯ ಮತ್ತು ತಾಯಿ ಪಾರ್ವತಮ್ಮನವರ ಉದರಲ್ಲಿ ಜನಿಸಿದರು. ಶ್ರೀ ಗಚ್ಚಿನಮಟದಲ್ಲಿ ಶ್ರೀ ಚನ್ನಬಸವ ಪುರಾಣ ನಡೆದಾಗ ಇವರ ತಂದೆ- ತಾಯಿಗಳು ಶ್ರೀಮಠಕ್ಕೆ ಶ್ರೀ ಚನ್ನಬಸವ ಮಹಾಸ್ವಾಮಿಗಳನ್ನು ಅರ್ಪಿಸಿದರು. ಅದಕ್ಕಾಗಿ ಇವರಿಗೆ ''ಚನ್ನಬಸವ ದೇವರು'' ಎಂದು ನಾಮ ಪಡೆದರು. ಅಥಣಿಯಲ್ಲಿ ವಿದ್ಯಾಭ್ಯಾಸ ಕೈಕೊಂಡು, ಶ್ರೀ ಶಿವಯೋಗಿಗಳಲ್ಲಿ ಹಾಗೂ ಗುರುಗಳಲ್ಲಿ, ಲಿಂಗದಲ್ಲಿ ಬದುಕಿನ ಉದ್ದಕ್ಕೂ ನಿಷ್ಠೆಯನ್ನು ಇಟ್ಟಿದ್ದರು. ಅನೇಕ ಸಂದರ್ಭದಲ್ಲಿ ಅನೇಕ ಎಡರು ತೊಡರುಗಳನ್ನು ಎದುರಿಸಿ, ಶ್ರೀ ಮಠವನ್ನು ಉನ್ನತ ಸ್ಥಾನಕ್ಕೆ ತೆಗೆದುಕೊಂಡು ಹೋದರು.

''ಶರಣರ ಮಹಿಮೆ ಮರಣದಲ್ಲಿ ಕಾಣು '' ಎನ್ನುವಂತೆ ದಿನಾಂಕ : ೧೩-೦೪-೧೯೭೬ ಶುಕ್ರವಾರ ದಿನ ಮಧ್ಯಾಹ್ನ ೨-೪೦ ಗಂಟೆಗೆ, ಶ್ರೀ ಶಿವಯೋಗಿಗಳವರ ಪುಣ್ಯ ತಿಥಿಯ ದಿವಸ ಲಿಂಗೈಕ್ಯರಾದರು. ಶ್ರೀ ಶಿವಯೋಗಿಗಳ ಭಾವಚಿತ್ರದ ಜೊತೆಗೆ ಮೂರನೆಯ ಶ್ರೀ ಮ.ನಿ.ಪ್ರ. ಚನ್ನವಸವ ಮಹಾಸ್ವಾಮಿಗಳ ಭಾವಚಿತ್ರ ಪೂಜೆಗೊಂಡು ಪ್ರತಿ ವರ್ಷ ರಥೋತ್ಸವ ಜರುಗುವದು ವೈಶಿಷ್ಟ್ಯವಾಗಿದೆ. ಇವರ ಗದ್ದುಗೆ ಹೊಸಗುಂಡದಲ್ಲಿರುವದನ್ನು ನೋಡುತ್ತೇವೆ.

ಮೌನಮುನಿ ಶ್ರೀ ಮರುಳಶಂಕರ ದೇವರು:

ಅಥಣಿಯ ಮುಗ್ಧ ಮಹಾಚೇತನ ಶ್ರೀ ಮರುಳಶಂಕರ ದೇವರು ಶ್ರೀ ಮುರುಘೇಂದ್ರ ಶಿವಯೋಗಿಗಳ ತಪೋವನದಲ್ಲಿ ಬೆಳೆದ ಬಿಲ್ವವೃಕ್ಷ. ಶ್ರೀ ಮರುಳಶಂಕರ ದೇವರುಗಳವರ ಪೂರ್ವಜರು ಮೂಲತಃ ರಾಯಬಾಗ ತಾಲೂಕಿನ ''ಇಟ್ನಾಳ'' ಗ್ರಾಮದವರು ತಂದೆ ಕಾಡಯ್ಯ, ತಾಯಿ ಮುರುಗೆಮ್ಮ

ಇವರ ನಾಲ್ಕನೇಯ ಶಿಶುವಾಗಿ ಶ್ರೀ ಮರುಳಶಂಕರ ದೇವರು, ಸುಮಾರಾಗಿ ಕ್ರಿ.ಶ. ೧೯೧೩ ಶ್ರಾವಣ ಶುದ್ಧ ತ್ರಯೋದಶಿಯಂದು ಜನಿಸಿದರು. ಇವರ ನಾಮಕರಣವನ್ನು ಶ್ರೀ ಶಿವಯೋಗಿಗಳೇ ''ಮರುಳಶಂಕರ'' ಎಂದು ತಮ್ಮ ಗುರುಗಳನ್ನು ನೆನಪಿಸಿ, ಅಭಿದಾನನಾಮ ನೀಡಿದರು.

ಚಿಕ್ಕ ಶಿಶುವಾಗಿರುವಾಗ ಡೋಗಿ ಹುಣ್ಣು ತಲೆಯಲ್ಲಿ ಆವರಿಸಿತು. ಇದರಿಂದಾಗಿ ಅವರು ಸಾವಿನ ದವಡೆಯಲ್ಲಿ ಇದ್ದರು, ಆದರೆ ಶ್ರೀ ಶಿವಯೋಗಿಗಳ ಸ್ಪರ್ಷದಿಂದ ಚೈತನ್ಯದ ಚಿಲುಮೆ ತುಂಬಿ ಗಾಯ ಮಾಯವಾಗಿ ಮರುಜನ್ಮ ಪಡೆದರು. ಮುಂದೆ ಶ್ರೀ ಗಚ್ಚಿನಮಠದಲ್ಲಿಯೇ ಶಿಕ್ಷಣ ಪಡೆದರು. ಇವರನ್ನು ತಂದೆ-ತಾಯಿಗಳು ಶ್ರೀಮಠಕ್ಕೆ ಅರ್ಪಿಸಿದರು. ಇವರು ಯಾವ ಪದವಿಯನ್ನು ಬಯಸದೇ, ಯಾವದೇ ಮಠಾಧಿಪತಿಯಾಗದೇ, ಶ್ರೀ ಗಚ್ಚಿನಮಠದಲ್ಲಿಯೇ ಉಳಿದರು. ಆದರೆ ಶ್ರೀ ಶಿವಯೋಗಿಗಳ ಗದ್ದುಗೆಯನ್ನು ಹೊತ್ತು ಹೊರಡುವ ಮುನ್ನ ಪೂಜಿಸುತ್ತಿದ್ದಾರೆ. ತ್ರಿಕಾಲ ಪೂಜೆಯು ಇವರಿಂದಲೇ ನಡೆಯುತ್ತದೆ. ಇವರು ಭೂಗರ್ಭದ ಜಲಜ್ಞಾನ ಹೊಂದಿದವರಾಗಿದ್ದು ಅನೇಕ ಕೊಳವೆ ಬಾವಿಗಳಿಗೆ ಕಾರಣೀಭೂತರಾಗಿದ್ದಾರೆ. ಅಥಣಿಯಲ್ಲಿ ಇಂದಿಗೂ ಯಾವದೇ ಜಾತಿ, ಮತ, ಪಂಥ ಬೇದ - ಭಾವವಿಲ್ಲದೇ ಅನೇಕ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಾರೆ. ಇವರ ಹೆಸರಿನ ಮೇಲೆ ಪೂಜಶ್ರೀ ಮರುಳಶಂಕರ ದೇವರು ಶಾಲೆಯನ್ನು ಶ್ರೀ ಶಿವಯೋಗಿ ಮುರುಘೇಂದ್ರ ಸ್ವಾಮಿ ತರುಣ ಸೇವಾ ಸಂಘದವರು ಸ್ಥಾಪಿಸಿರುವರು. ಇವರೋರ್ವರು ಅಥಣಿಯ ಪರುಷಮಣಿ.

ಶ್ರೀ ಮ.ನಿ.ಪ್ರ.ನಾಲ್ಕನೆಯ ಚನ್ನಬಸವ ಮಹಾಸ್ವಾಮಿಗಳು ( ಇಂದಿನ ಸ್ವಾಮಿಗಳು) ಇವರು ಅಥಣಿ ಗಚ್ಚಿನಮಠದ ಹಾಗೂ ಹಾವೇರಿ ಜಿಲ್ಲೆಯ ಅಗಡಿ ಮಠದ ಪೀಠಾಧಿಪತಿಗಳು, ವಿನಯ ಸಂಪನ್ನಶೀಲರು, ತಾಳ್ಮೆ ಸಹಭಾವ ಹೊಂದಿದವರು. ಇವರು ಮೂಲತಃ ಬಿಜಾಪುರ ಜಿಲ್ಲೆಯ ಕಾಜಿಬೀಳಗಿ ಗ್ರಾಮದವರು. ತಂದೆ ಶಿವಲಿಂಗಯ್ಯ, ತಾಯಿ ನೀಲಾಂಬಿಕೆ ಉದರದಲ್ಲಿ ಜನಿಸಿದ ಪುಣ್ಯ ಪುರುಷರು. ಶ್ರೀಗಳು ಇವನಾರವ-ಇವನಾರವ ಎಂದೆನಿಸದೆ ಸರ್ವ ಭಕ್ತರನ್ನು ಸಮಾನ ಮನೋಭಾವದಿಂದ ಕಾಣುವರು. ಇವರು ತಮ್ಮ ಶಿಕ್ಷಣವನ್ನು ಕಾಜಿಬೀಳಗಿ ಹಾಗೂ ಹಾವೇರಿಯಲ್ಲಿ ಕೈಕೊಂಡರು. ನಂತರ ಅಗಡಿಯ ಮಠಾಧಿಪತಿಗಳಾಗಿ ಇರುವಾಗ ೧೯೮೬ ರಲ್ಲಿ ಧಾರವಾಡದ ಶ್ರೀ ಮಹಾಂತ ಮಹಾಸ್ವಾಮಿಗಳಿಂದ ಗುರು ಪರಂಪತೆಯ ಅನುಗುಣವಾಗಿ ಅಧಿಕಾರ ಸ್ವೀಕರಿಸಿ ಇಂದು ಶ್ರೀ ಮಠವನ್ನು ಜೀರ್ಣೋದ್ಧಾರ ಕೈಕೊಂಡಿರುವದು ಹೆಮ್ಮೆಯ ಸಂಗತಿಯಾಗಿದೆ. ಇವರು ಅಥಣಿಯ ಸದ್ಭಕ್ತರಿಗೆ ಹಾಗೂ ನಾಡಿಗೆ ಮಾರ್ಗದರ್ಶಕರಾಗಿರುವರು. ಇಂದು ಶ್ರೀ ಗಚ್ಚಿನಮಠದಿಂದ ಶೈಕ್ಷಣಿಕ ಸಂಸ್ಥೆಯೊಂದನ್ನು ಪ್ರಾರಂಭಿಸಿರುತ್ತಾರೆ.

ಹೀಗೆ ಅನೇಕ ಮಹಾನುಭಾವರು ಶ್ರೀ ಗಚ್ಚಿನಮಠದಲ್ಲಿ ತಪಸ್ಸುಗೈದು ಭಕ್ತರನ್ನು , ಸಮಾಜವನ್ನು ಅನೇಕ ಸಂಸ್ಥೆಗಳನ್ನು ಮುನ್ನಡೆಸಿದ ಮಹಾಮಹಿಮರು ಇರುವರು.

### ವೀರಶೈವ ಧರ್ಮದ ಮೂರನೆಯ ಘಟ್ಟವಾಗಿ ಶ್ರೀ ಗಚ್ಚಿನಮಠ

ವೀರಶೈವ ಧರ್ಮದಲ್ಲಿ ೧೨ ನೆಯ ಶತಮಾನದ ಅಲ್ಲಮಪ್ರಭುಗಳ ನೇತೃತ್ವದಲ್ಲಿ ಬಸವಣ್ಣನವರು ಹೊಸ ಕ್ರಾಂತಿ ಮಾಡಿದರು. ಇದು ಮೊದಲ ಘಟ್ಟವಾದರೆ, ೧೬ ನೇಯ ಶತಮಾನದಲ್ಲಿ ಶ್ರೀ ಎಡೆಯೂರ

ಸಿದ್ಧಲಿಂಗ ಮಹಾಸ್ವಾಮಿಗಳು ನೂರೊಂದು ವಿರಕ್ತರೊಂದಿಗೆ ವೀರಶೈವ ಧರ್ಮವನ್ನು ಪುರುತ್ಥಾನ ಮಾಡಿದರು. ಹಾಗೆಯೇ ೨೦ನೆಯ ಶತಮಾನದಲ್ಲಿ ಶ್ರೀ ಅಥಣಿ ಗಚ್ಚಿನಮಠದ ಶ್ರೀ ಮುರುಘೇಂದ್ರ ಶಿವಯೋಗಿಗಳು ವೀರಶೈವ ಧರ್ಮದಲ್ಲಿ ಮೂರನೆಯ ಘಟ್ಟದಲ್ಲಿ ಕೇಂದ್ರ ಬಿಂದು. ಇದನ್ನು ಕೇಂದ್ರಿಕರಿಸಿಕೊಂಡು ಸಂಶೋಧಿಸಿದರೆ, ಅನೇಕ ಹೊಸ ವಿಚಾರಗಳು ಈ ಧರ್ಮಕ್ಕೆ ಕೊಡುಗೆ ನೀಡಿದ ಕೀರ್ತಿ ಶ್ರೀ ಮಠಕ್ಕೆ ಸಲ್ಲುತ್ತದೆ. ಇವರು ತಪಸ್ವಿಗಳು, ಅವರ ಶ್ರೀವಾಣಿ ಸತ್ಯವಾಗುತ್ತಿತ್ತು. ಆದ್ದರಿಂದ ಇವರ ಅನೇಕ ಶಿಷ್ಯರು ಇವರ ಮೇಲೆ ನಿಷ್ಠೆ ಇಟ್ಟು ಸಮಾಜವನ್ನು ಮುನ್ನಡೆಸಿದರು. ಹೀಗೆ ಮುನ್ನೆಡೆಸಿದವರಲ್ಲಿ ಶಿರಸಂಗಿಯ ಲಿಂಗರಾಜರು, ವಾರದ ಮಲ್ಲಪ್ಪನವರು, ಅರಟಾಳ ರುದ್ರಗೌಡರು, ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳು, ಬಳ್ಳೂರಿನ ಶ್ರೀ ಗುರುಬಸವ ಮಹಾಸ್ವಾಮಿಗಳು, ಬಿದರಿಯ ಶ್ರೀ ಕುಮಾರ ಮಹಾಸ್ವಾಮಿಗಳು, ಹಾನಗಲ್ಲದ ಕುಮಾರ ಮಹಾಸ್ವಾಮಿಗಳು, ನಿಡಸೋಸಿ ಮಹಾಸ್ವಾಮಿಗಳು, ಡಾ. ಫ.ಗು. ಹಳಕಟ್ಟಿ ಲೋಕಮಾನ್ಯ ತಿಲಕರು, ಶ್ರೀ ಜಯದೇವ ಮಹಾಸ್ವಾಮಿಗಳು,

ಶ್ರೀ ಧಾರವಾಡದ ಮಹಾಂತಪ್ಪಗಳು, ಶ್ರೀ ಲಿಂಗಾನಂದ ಮಹಾಸ್ವಾಮಿಗಳು, ಮೊದಲಾದವರು ಇವರ ಜೊತೆಗೆ ಕೈಗೂಡಿಸಿದವರು. ಶ್ರೀ ಮುರುಘೇಂದ್ರ ಶಿವಯೋಗಿಗಳು ಅಖಿಲ ಭಾರತ ವೀರಶೈವ ಮಹಾಸಭೆ, ಕೆ.ಎಲ್. ಇ. ಮತ್ತು ಬಿ.ಎಲ್.ಡಿ.ಇ., ಮತ್ತು ಬಸವೇಶ್ವರ ವಿದ್ಯಾವರ್ಧಕ ಸಂಸ್ಥೆ, ಬಾಗಲಕೋಟ ಮೊದಲಾದ ಸಂಸ್ಥೆಗಳು ಇವರ ಕೃಪಾಶೀರ್ವಾದದಿಂದಲೇ ಮುನ್ನಡೆದವು ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಆದ್ದರಿಂದ ಲಿಂಗಾಯತ ಧರ್ಮದ ಮೂರನೇಯ ಘಟ್ಟವಾಗಿ ಶ್ರೀ ಗಚ್ಚಿನಮಠದ ಶ್ರೀ ಮುರುಘೇಂದ್ರ ಶಿವಯೋಗಿಗಳನ್ನು ಸಾಂಸ್ಕೃತಿಕ, ಆಧ್ಯಾತ್ಮಿಕ, ಶೈಕ್ಷಣಿಕ, ರಾಜಕೀಯ ಹಿನ್ನಲೆಯಲ್ಲಿ ಅಭ್ಯಸಿಸಬಹುದಾಗಿದೆ.

**ಅಥಣಿ ಗಚ್ಚಿನಮಠದಲ್ಲಿ ನೂರಾರು ಹಸ್ತಪ್ರತಿ ಗ್ರಂಥಗಳು ಬೆಳಕಿಗೆ ಬಂದಿವೆ.**

ಅಥಣಿಯ ಗಚ್ಚಿನಮಠದಲ್ಲಿ ಹಸ್ತಪ್ರತಿ ತಾಡೋಲೆಗಳ ಅಮೂಲ್ಯವಾದ ಗ್ರಂಥಗಳು ಪತ್ತೆಯಾಗಿವೆ. (ಅನುಬಂಧದಲ್ಲಿ ಶಿವಯೋಗಿಗಳ ಹಸ್ತಾಕ್ಷರ ಕಾಣಬಹುದು) ಇಪ್ಪತ್ತೊಂದು ಸಾವಿರ ಪುಟಗಳ ನೂರಾರು ಗ್ರಂಥಗಳು ಹಸ್ತಪ್ರತಿ ರೂಪದಲ್ಲಿ ಲಭ್ಯವಾಗಿವೆ. ಸುಮಾರು ಎಂಟು ಸಾವಿರ ತಾಡೋಲೆಗಳ ನೂರಾರು ಗ್ರಂಥಗಳು ಪತ್ತೆಯಾಗಿವೆ. ಈ ಎಲ್ಲ ಹಸ್ತಪ್ರತಿ ಹಾಗೂ ತಾಡೋಲೆಗಳು ಎರಡು ದೊಡ್ಡ ಸಂದುಕಿನಲ್ಲಿ ದೊರಕಿವೆ ಎಂದು ರಾಷ್ಟ್ರೀಯ ಹಸ್ತ ಪ್ರತಿ ಸರ್ವೇಕ್ಷಣ ಯೋಜನೆಯ ತಾಲೂಕು ಪ್ರತಿನಿಧಿ ಅಪ್ಪಾಸಾಹೇಬ ಅಲಿಬಾದಿ ತಿಳಿಸಿದ್ದಾರೆ.

ರಾಘವಾಂಕನ ಕಾವ್ಯ, ಪ್ರಭುಲಿಂಗ ಲೀಲೆ, ವೈದ್ಯಕೀಯ ಪುಸ್ತಕ, ಪಂಚ ವಿಂಶತಿ ಕಥೆಗಳು, ಸ್ವರಚಿಂತಾಮಣಿ, ಸೋಮೇಶ್ವರ ಶತಕ, ನಿಜಲಿಂಗ ಶತಕ, ಸ್ಕಂದ ಪುರಾಣ (ಮರಾಠಿ ಭಾಷೆಯಲ್ಲಿ ಸುಮಾರು ಸಾವಿರ ಪುಟಗಳು), ಗುರು ಬಸವೇಶ್ವರ ದೇವರ ಷಟ್‌ಸ್ಥಲದ ವಚನ, ಅನುಭವ ವಚನಗಳು, ಸಟೀಕ ಲಿಂಗ ಪುರಾಣ (ಮರಾಠಿ), ಮುಕ್ತಾಂಗನೆಯ ಕಂಠಮಾಲೆ ಮತ್ತು ಅನುಭವ ಸಾರ, ಅನುಭವಾಮೃತ ಮತ್ತು ಕೈವಲ್ಯ ಪದ್ಧತಿ ಮುಂತಾದ ಗ್ರಂಥಗಳು ಹಸ್ತ ಪ್ರತಿ ರೂಪದಲ್ಲಿ ದೊರಕಿವೆ. ಹೆಸರಿಸಲಾಗದ ಹಳಗನ್ನಡ ಗ್ರಂಥಗಳೂ ದೊರಕಿವೆ.

ಸರ್ವಜ್ಞನ ವಚನಗಳು, ವೀರಶೈವ ರಗಳೆ, ಚನ್ನಬಸವ ದೇವರು ನಿರೂಪಿಸಿದ ಕರ್ಣಹಸಿಗೆ, ನಂದೀಶ್ವರ ಪ್ರಶ್ನೆ, ವಚನ ಸಂಗ್ರಹ, ನಾಮಾವಲಿ, ಬಸವೇಶ್ವರರು ನಿರೂಪಿಸಿದ ಷಟ್‌ಸ್ಥಲ ವಚನಗಳು, ಪರಮೇಶ್ವರನ ಶೃತಿಕಥಾ ತಾತ್ಪರ್ಯ, ರಾಜಶೇಖರ ವಿಳಾಸ, ಬ್ರಹ್ಮವಿದ್ಯಾ, ಬಸವೇಶ್ವರ ಪುರಾಣ, ವಿವೇಕ ಚಿಂತಾಮಣಿ, ಗಿರಿಜಾಂಬಿ ಕಾವ್ಯ, ಏಳು ಸಾವಿರ ವಚನಗಳು, ನಿಜಗುಣ ಶಿವಯೋಗಿ ವಿರಚಿತ ಅನುಭವ ಸಾರ, ಕೈವಲ್ಯ ಪದ್ಧತಿ, ಅಮರಸಿಂಹ ನಿಘಂಟು, ಶಿವರಾತ್ರಿ ಕಥೆ, ಸಂಸ್ಕೃತ ಗ್ರಂಥ ಚಪರಾ ಚಾರ್ಮ ಮುಂತಾದ ಹೆಸರಿನ ತಾಳೆಗರಿ ರೂಪದಲ್ಲಿ ಗ್ರಂಥಗಳು ದೊರಕಿವೆ. ಹೆಸರಿಸಲು ಸಾಧ್ಯವಾಗದ ಅನೇಕ ತಾಡೋಲೆ ಗ್ರಂಥಗಳೂ ಕೂಡ ಲಭ್ಯವಾಗಿವೆ.

ಕನ್ನಡ ಕವಿ ಕಾಳಿದಾಸರೆಂದು ವಚನಾಂಕಿತರಾದ ಅಥಣಿಯ ಮಲ್ಲಿಕಾರ್ಜುನ ಮೋಟಗಿ ಅವರ ಮೂರು ಗ್ರಂಥಗಳು ಹಸ್ತ ಪ್ರತಿ ರೂಪದಲ್ಲಿ ಬೆಳಕಿಗೆ ಬಂದಿವೆ. ಎಪ್ಪತ್ತು ವಿವಿಧ ಕವನಗಳ ತೊಂಬತ್ತೈದು ಪುಟಗಳ ಹೆಸರಿಸಲಾಗದ ಕಾವ್ಯಕೃತಿಯ ಹಸ್ತಪ್ರತಿ, ಸಾಯಿಬಾಬಾ ಅವರ ಕುರಿತ 'ಸಾಯಿ ಚರಿತಾಮೃತ' ಗದ್ಯ ಕೃತಿ, ಭಾವಗೀತೆಗಳ 'ನೀನಾರು' ಎಂಬ ಪದ್ಯಕೃತಿ ದೊರಕಿವೆ.

ಈ ಎಲ್ಲ ಗ್ರಂಥಗಳನ್ನು ಅಮೂಲಾಗ್ರವಾಗಿ ಅಧ್ಯಯನ ಮಾಡಿ ಅವುಗಳನ್ನು ಬೆಳಕಿಗೆ ತರಬೇಕಾದ ಅವಶ್ಯಕತೆ ಇದೆ. ನಾಡಿನ ಸಂಶೋಧಕರು, ವಿದ್ವಾಂಸರು ಹಾಗೂ ಸರ್ಕಾರ ಗಮನಹರಿಸಬೇಕಾದ ಅವಶ್ಯಕತೆ ಇದೆ. ಈ ಗ್ರಂಥಗಳನ್ನು ಸರಿಯಾಗಿ ಸಂರಕ್ಷಿಸಿ, ಪ್ರಕಟಿಸಿ ಮಠದಲ್ಲಿ ಪ್ರದರ್ಶನಕ್ಕೆ ಇಡುವ ಮಹತ್ ಕಾರ್ಯ ಆಗಬೇಕಾಗಿದೆ. (ಬಾನುವಾರ ೧೧ ಡಿಸೆಂಬರ ೨೦೦೫ ರ ಕನ್ನಡ ಪ್ರಭ ಪತ್ರಿಕೆಯ ರಾಜ್ಯ ಪುರವಣಿಯಲ್ಲಿ ಪ್ರಕಟವಾದಂತೆ.)

ಅಥಣಿಯ ಮೋಟಗಿ ಮಠದಲ್ಲಿ ಕೂಡ ೩೫ ಅಮೂಲ್ಯ ತಾಡೋಲೆ ಹಸ್ತಪ್ರತಿ ಗ್ರಂಥಗಳು ಬೆಳಕಿಗೆ ಬಂದಿವೆ.

## ಅಥಣಿ ಅಭಿನವ ಮಂತ್ರಾಲಯ

ಆಂಧ್ರದಲ್ಲಿಯ ಮಂತ್ರಾಲಯದಷ್ಟೆ ಪಾವಿತ್ರ್ಯತೆಯನ್ನು ಪಡೆದಿರುವ ಅಥಣಿಯ ಶ್ರೀ ರಾಯರ ಮಠವು ಅಭಿನವ ಮಂತ್ರಾಲಯವೆಂದು ಉತ್ತರ ಕರ್ನಾಟಕದಲ್ಲಿ ಪ್ರಖ್ಯಾತಿ ಪಡೆದಿದೆ.[೭] ದಿ. ಭೀಮದಾಸರಿಂದ ಸ್ಥಾಪಿಸಲ್ಪಟ್ಟ ರಾಘವೆಂದ್ರ ಸ್ವಾಮಿಗಳ ಈ ಬೃಂದಾವನವು ಕರ್ನಾಟಕ - ಮಹಾರಾಷ್ಟ್ರದ ಭಕ್ತ ಸಮೂಹವನ್ನು ಆಕರ್ಷಿಸುತ್ತಿದೆ.(ಚಿತ್ರ ಸಂ.೬) ಸದ್ಯ ಈ ಮಠವು ಜೀರ್ಣೋದ್ಧಾರಗೊಂಡು ಸಕಲ ಸುಸಜ್ಜಿತ ಕಲ್ಯಾಣ ಮಂಟಪವಾಗಿ ಸಮಾಜ ಸೇವೆಯ ಮುಂಚೂಣಿಯಲ್ಲಿದೆ.

ಇದಲ್ಲದೆ ಅಥಣಿ ಪರಿಸರದಲ್ಲಿ ಇನ್ನೂ ಅನೇಕ ಮಠಗಳು ಶೈಕ್ಷಣಿಕ ಹಾಗೂ ಧಾರ್ಮಿಕ ಚಟುವಟಿಕೆಗಳು ಮುಂದುವರಿಸಿಕೊಂಡು ಸಮಾಜದ ಅಭಿವೃದ್ಧಿಯಲ್ಲಿ ನಿರಂತರವಾಗಿ ಶ್ರಮಿಸುತ್ತಿವೆ.

★ ★ ★

## ಅಡಿ ಟಿಪ್ಪಣಿಗಳು

೧) ಪ್ರೊ॥ ಎಸ್.ಕೆ. ತರ್ದವಾಡಿ ನಾಡು - ಒಂದು ಅಧ್ಯಯನ
ಪು. ೨೯

೨) ಇಂಡಿಯನ್ ಅಂಟಿಕ್ವಾರಿ
ಸಂ. ೩೦
ಪು. ೬೭-೬೮

೩) ಕಾಮತ ಯು. ಸೂರ್ಯನಾಥ
ಇತಿಹಾಸ ದರ್ಶನ
ಸಂ. ೫೨. ೧೯೯೦

೪) ಕಾಮತ ಯು. ಸೂರ್ಯನಾಥ
ಬೆಳಗಾಂವ್ ಜಿಲ್ಲೆಯ ಗೆಜಿ ಟಿಯರ್
೧೯೮೭
ಪು.೩೯೬

೫) ಕರ್ನಾಟಕ ಇನ್‌ಸ್ಕ್ರಿಪ್ಷನ್ಸ್
ಸಂ. ೨
ಶಾ.ಸಂ. ೨೫
ಪು. ೯೩

೬) ಸುಕ್ಷೇತ್ರ ಅಥಣಿ
ಶ್ರೀ ಗಚ್ಚಿನ ಮಠ ಅಥಣಿ
ಲೇ: ಮಹಾಂತೇಶ ಎಸ್. ಉಕ್ಕಲಿ
ವರ್ಷ: ೨೦೦೫

೭) ಡಾ॥ ಆರ್.ಜಿ. ಗುಡಿ
ಸುವರ್ಣ ಸುಗಂಧ
ಪು. ೧೧೧. ೨೦೦೫

# ಅಧ್ಯಾಯ -೬

# ಸಮಾರೋಪ

ಅಥಣಿ ಪರಿಸರದ ಚಾರಿತ್ರಿಕತೆಯು ಕನ್ನಡ ನಾಡಿನ ಇತಿಹಾಸದೊಂದಿಗೆ ಹಾಸುಹೊಕ್ಕಾಗಿ ಬೆಳೆದು ಬಂದಿದೆ. ಈ ಪ್ರದೇಶದ ಭೌಗೋಳಿಕ ಪರಿಸರವು ಪ್ರಾಚೀನ ಕಾಲಹದಿಂದಲೂ ಮಾನವ ವಾಸಿಸಲು ಯೋಗ್ಯವಾದ ಸ್ಥಳವಾಗಿದ್ದು ಮಾನವ ಸಂಸ್ಕೃತಿಯ ವಿವಿಧ ಘಟ್ಟಗಳು ಬೆಳೆದು ಬರಲು ಇಲ್ಲಿನ ಪ್ರದೇಶ ಮಹತ್ವದ ಪಾತ್ರವಹಿಸಿದೆ. ಇಲ್ಲಿನ ಚಾರಿತ್ರಿಕ ನೆಲೆಗಳು ವಿವಿಧ ಧರ್ಮ ಹಾಗೂ ಅನೇಕ ಅರಸು ಮನೆತನಗಳ ಅಳ್ವಿಕೆಯನ್ನು ಸ್ಪಷ್ಟಪಡಿಸುತ್ತವೆ. ಅಲ್ಲದೆ ಇಲ್ಲಿ ದೊರೆತಿರುವ ಪ್ರಾಚೀನ ಸ್ಮಾರಕಗಳು ಶಿಥಿಲಾವಸ್ಥೆಯಲ್ಲಿದ್ದು ಸ್ಥಳೀಯ ಜನರ ಐತಿಹಾಸಿಕ ಪ್ರಜ್ಞೆಯ ಕೊರತೆಯನ್ನು ಎತ್ತಿ ತೋರಿಸುತ್ತೆವೆ. ಜೊತೆಗೆ ಗಡಿ ಭಾಗವಾಗಿರುವ ಅಥಣಿ ಪ್ರದೇಶದ ಚಾರಿತ್ರಿಕ ಸ್ಮಾರಕಗಳ ರಕ್ಷಣೆಯ ಬಗ್ಗೆ ಸರ್ಕಾರವು ದಿವ್ಯ ನಿರ್ಲಕ್ಷ್ಯ ತಾಳಿದ್ದು ಗೋಚರವಾಗುತ್ತದೆ.

ಈ ಪರಿಸರದ ಪ್ರತಿಯೊಂದು ಗ್ರಾಮಗಳಲ್ಲಿ ಕ್ಷೇತ್ರಕಾರ್ಯ ಕೈಕೊಂಡು ಪುರಾತತ್ವ ಅವಶೇಷಗಳನ್ನೆಲ್ಲ ಕಲೆ ಹಾಕಿ ಅವುಗಳನ್ನು ವಸ್ತುನಿಷ್ಠವಾಗಿ ಅಧ್ಯಯನ ಮಾಡಿದರೆ ಈ ಪರಿಸರದ ರಾಜಕೀಯ ಇತಿಹಾಸದ ವಿವಿಧ ಹಂತಗಳನ್ನು ಅಭ್ಯಾಸ ಮಾಡಬಹುದು. ಅಲ್ಲದೆ ಇಲ್ಲಿನ ಸಾಂಸ್ಕೃತಿಕ ಚರಿತ್ರೆಯ ಮೇಲೆ ಹೊಸ ಬೆಳಕನ್ನು ಚೆಲ್ಲಬಹುದು. ವಿವಿಧ ಧರ್ಮ ಹಾಗೂ ಜನಾಂಗಗಳನ್ನು ಹೊಂದಿರುವ ಈ ಪ್ರದೇಶ ಕನ್ನಡನಾಡಿನ ಗಡಿ, ಭಾಗದಲ್ಲಿದ್ದರೂ ಸಾಂಸ್ಕೃತಿಕ ವೈವಿಧ್ಯತೆಯನ್ನು ಹೊಂದಿದ್ದು ಸರ್ವಧರ್ಮ ಸಮನ್ವಯವನ್ನು ಸಾಧಿಸಿದೆ.

ನವಶಿಲಾಯುಗದ ಚಾರಿತ್ರಿಕ ನೆಲೆಗಳು ಕೃಷ್ಣಾ ತೀರದಲ್ಲಿ ಹೆಚ್ಚಾಗಿ ಲಭ್ಯವಾಗಿವೆ. ಇಲ್ಲಿನ ಇನ್ನೂ ಅನೇಕ ಗ್ರಾಮಗಳಲ್ಲಿ ಉತ್ಖನನ ಕೈಗೊಂಡರೆ ಶಿಲಾಯುಗದ ಸಂಸ್ಕೃತಿಯ ಕುರಿತು ಹೆಚ್ಚಿನ ವಿವರಣೆಯು ಲಭ್ಯವಾಗಬಹುದು. ಕೇವಲ ನವಶಿಲಾಯುಗ - ಸೂಕ್ಷ್ಮಶಿಲಾಯುಗದ ನೆಲೆಗಳು ಮಾತ್ರ ಇಲ್ಲಿ ಲಭ್ಯವಾಗಿದ್ದು ಹೆಚ್ಚಿನ ಸಂಶೋಧನೆ ಕೈಗೊಂಡರೆ, ಹಳೆ ಶಿಲಾಯುಗ, ಸಂಸ್ಕೃತಿಯ ಕುರುಹುಗಳು ಇಲ್ಲಿ ಲಭ್ಯವಾಗಬಹುದೆಂದು ಇಲ್ಲಿನ ಭೂ- ರಚನೆಯನ್ನು ಅಧ್ಯಯನ ಮಾಡಿದಾಗ ಅರಿವಿಗೆ ಬರುತ್ತದೆ.

ಕಲ್ಯಾಣಿ ಚಾಲುಕ್ಯರ ನಂತರದ ಆಳ್ವಿಕೆಯಲ್ಲಿ ಶಿಕ್ಷಣ ವ್ಯವಸ್ಥೆಯ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ ನಂತರ ಮರಾಠರ ಆಳ್ವಿಕೆಯಿಂದ ಶೈಕ್ಷಣಿಕ ಚರಿತ್ರೆಯನ್ನು ತಿಳಿದುಕೊಳ್ಳಬಹುದು ಇದರಿಂದ ನಮಗೆ ಗೋಚರವಾಗುವದೆನೆಂದರೆ ಶೈಕ್ಷಣಿಕ ಚರಿತ್ರೆ ಬಗ್ಗೆ ಹೆಚ್ಚಿನ ಮಾಹಿತಿ ಲಭ್ಯವಾಗಿಲ್ಲ ಹೆಚ್ಚಿನ ಮಾಹಿತಿ ಲಭ್ಯವಾಗಬೇಕಾದರೆ ಸಾಹಿತ್ಯದ ಅಕರಗಳ ಸಂಶೋಧನೆಯಾಗಬೇಕು ಅವುಗಳಿಂದ ಮಾತ್ರ ಅಥಣಿ ಪರಿಸರದ ಶೈಕ್ಷಣಿಕ ಚರಿತ್ರೆಯನ್ನು ಪುನರಚಿಸಬಹುದು.

ಪ್ರಾಚೀನ ಸ್ಮಾರಕಗಳ ಸಂರಕ್ಷಣೆಯಲ್ಲಿ ಸ್ಥಳಿಯರಿಗೆ ಚರಿತ್ರೆ ಪ್ರಜ್ಞೆ ಮಾಡಿಸುವದು ಅತಿಮುಖ್ಯವಾದ ಕೆಲಸವಾಗಿದೆ. ಆರ್ಥಿಕವಾಗಿ ಹಿಂದುಳಿದ ಪ್ರದೇಶವಾಗಿದ್ದರಿಂದ ಶೈಕ್ಷಣಿಕವಾಗಿ ಅನೇಕ ಗ್ರಾಮಗಳು ಪ್ರಗತಿ ಸಾಧಿಸಬೇಕಾಗಿದೆ. ಚಾರಿತ್ರಿಕ ನೆಲೆಗಳಿರುವ ಗ್ರಾಮಗಳಲ್ಲಿ ಐತಿಹಾಸಿಕ ಪ್ರಜ್ಞೆಯ ಕೊರತೆಯಿಂದಾಗಿ ಇಂದು ಅನೇಕ ಸ್ಮಾರಕಗಳು ನಶಿಸಿ ಕಣ್ಮರೆಯಾಗಿವೆ.

ಒಟ್ಟಿನಲ್ಲಿ ಅಥಣಿ ಪ್ರದೇಶದ ಸಾಂಸ್ಕೃತಿಕ ಚರಿತ್ರೆಯ ವಿವಿಧ ಮುಖಗಳನ್ನು ಸ್ಪಷ್ಟವಾಗಿ ಅರಿಯಬೇಕಾದರೆ ಇಲ್ಲಿ ಲಭ್ಯವಿರುವ ಎಲ್ಲ ಆಕರ ಸಾಮಗ್ರಿಗಳನ್ನು ವಸ್ತುನಿಷ್ಟವಾಗಿ ಅಧ್ಯಯ ಮಾಡಬೇಕು. ಇದರಿಂದಾಗಿ ಮಾತ್ರ ಕನ್ನಡ ನಾಡಿನ ಸಾಂಸ್ಕೃತಿಕ ಚರಿತ್ರೆಯ ಪುನರ್ಚನೆಯಲ್ಲಿ ಕಳೆದುಹೋಗಿರುವ ಕೊಂಡಿಗಳಲ್ಲಿ ಕೆಲವುಗಳನ್ನಾದರು ವ್ಯವಸ್ಥಿತವಾಗಿ ಜೊಡಿಸಿಕೊಳ್ಳಲು ಅವಕಾಶವಿದೆ.

ಅಥಣಿ ಪರಿಸರದಲ್ಲಿ ಕ್ಷೇತ್ರಕಾರ್ಯ ಕೈಕೊಂಡಾಗ ಚಾರಿತ್ರಿಕ ನೆಲೆಗಳು ನಿರ್ಲಕ್ಷಕ್ಕೊಳಗಾದದ್ದು ಸ್ಪಷ್ಟವಾಗಿ ಗೋಚರವಾಗುತ್ತದೆ. ಕರ್ನಾಟಕದ ಚರಿತ್ರೆಯಲ್ಲಿ ಉತ್ತರದ ಗಡಿಭಾಗದಲ್ಲಿರುವ ಅಥಣಿಯ ಪರಿಸರವು ಚಾರಿತ್ರಿಕವಾಗಿ ಮಹತ್ವದ ಸ್ಥಾನ ಪಡೆದಿದ್ದರೂ ಸಹ ಸಮಗ್ರ ಸಂಶೋಧನೆಗಳ ಕೊರತೆಯಿಂದಾಗಿ ಈ ಭಾಗದ ಚರಿತ್ರೆ ಪರಿಪೂರ್ಣವಾಗಿ ರಚಿತವಾಗಿಲ್ಲ. ಆದ್ದರಿಂದ ಈ ಪ್ರದೇಶ ಇನ್ನೂ ಅನ್ವೇಷಣೆ ಹಾಗೂ ಉತ್ಖನನಕ್ಕೆ ಒಳಪಟ್ಟರೆ ಹೊಸ ಹೊಸ ಚಾರಿತ್ರಿಕ ವಿಷಯಗಳು ಬೆಳಕಿಗೆ ಬರಬಹುದೆಂದು ಅಥಣಿ ಪರಿಸರದ ಸಾಂಸ್ಕೃತಿಕ ಚರಿತ್ರೆಯ ಅಧ್ಯಯನದಿಂದ ತಿಳಿದುಬಂದಿದೆ.

★ ★ ★

# ಪರಾಮರ್ಶನ ಗ್ರಂಥಗಳು


೦೧ ಕರ್ನಾಟಕ ಇನ್ಸ್‌ಕ್ರಿಪ್ಷನ್ಸ್, ಸಂಪುಟ ೨.
ಪ್ರಸಾರಾಂಗ ಕರ್ನಾಟಕ ವಿ.ವಿ. ಧಾರವಾಡ

೦೨ ಬೆಲ್ಗಮ್ ಡಿಸ್ಟ್ರಿಕ್ಟ್ ಗೆಜೆಟಿಯರ್.
ಸಂ. ಸೂರ್ಯನಾಥ ಯು. ಕಾಮತ್ ೧೯೮೭.

೦೩ ಬೆಲ್ಗಮ್ ಡಿಸ್ಟ್ರಿಕ್ಟ್ ಗೆಜೆಟಿಯರ್.
ಸಂ. ಜೆ. ಎಮ್. ಕ್ಯಾಂಪ್‌ಬೆಲ್ ೧೮೮೫

೦೪ ಶಾಸನಗಳ ಸಾಂಸ್ಕೃತಿಕ ಅಧ್ಯಯನ
ಸಂ. ಚಿದಾನಂದಮೂರ್ತಿ ಎಂ.
ಕ.ವಿ.ವಿ. ಹಂಪಿ. ೧೯೭೯

೦೫ ಕರ್ನಾಟಕ ಕೈಫಿಯಿತ್ತುಗಳು
ಸಂ. ಕಲಬುರ್ಗಿ ಎಮ್.ಎಮ್.
ಪ್ರಸಾರಾಂಗ ಕ.ವಿ.ವಿ. ಹಂಪಿ. ೧೯೯೪

೦೬ ಅಥಣಿ ತಾಲೂಕಾ ಸಮಗ್ರ ದರ್ಶನ
ಸಂ. ಡಾ. ವ್ಹಿ. ಎಸ್. ಮಾಳಿ ೨೦೦೭.

೦೭ ಭಾರತೀಯ ಸಾಮಾಜಿಕ ಸಂಸ್ಥೆಗಳು
ಲೇ. ನಂಜಮ್ಮಣಿ ಎಂ.

೦೮ ಕರ್ನಾಟಕ ಇತಿಹಾಸ ದರ್ಶನ
ಲೇ. ಕೃಷ್ಣರಾವ್ ಎಂ.ವ್ಹಿ. ಮತ್ತು ಕೇಶವ ಭಟ್ಟ ೧೯೭೦

೦೯ ಆ್ಯನಿವಲ್ ರಿಪೋರ್ಟ್ಸ್ ೧೯೫೩

೧೦ ಅಥಣಿ ತಾಲೂಕಿನ ದೇಸಗತಿಗಳು ವಿಶೇಷವಾಗಿ, ಪವಾರ ದೇಸಾಯಿಗಳು (ಮಂಗಸೂಳಿಕರ) - ಒಂದು ಅಧ್ಯಯನ (ಎಂ. ಫಿಲ್ ಸಂಪ್ರಬಂಧ )
ಸಂ. ಶ್ರೀಶೈಲ ಸಿ. ದೇವರಡ್ಡಿ
ಕ.ವಿ.ವಿ. ಹಂಪಿ. ೨೦೦೮

೧೧ ಕೊಕಟನೂರ ಒಂದು ಐತಿಹಾಸಿಕ ಅಧ್ಯಯನ
ಡಾ. ಮಾಳಿ ವ್ಹಿ. ಎಸ್.
ಕ. ವಿ. ವಿ. ಧಾರವಾಡ ೧೯೮೨

೧೨ ಅಥಣಿ ತಾಲೂಕು ದರ್ಶನ
ಸಂ. ವಾಲಿ ಎಮ್. ಎನ್.
ಆಯ್. ಬಿ. ಹೆಚ್. ಪ್ರಕಾಶನ, ಬೆಂಗಳೂರು

೧೩ ಸುವರ್ಣ ಸುಗಂಧ
ಸ್ಮರಣ ಸಂಚಿಕೆ ಸಾಹಿತ್ಯ ಸಾಂಸ್ಕೃತಿಕ ಸಂಘ, ಅಥಣಿ.
೨೦೦೫

೧೪ ಶರಣ ಚೇತನ ಪತ್ರಿಕೆ
ಮಾಸ ಪತ್ರಿಕೆ

# ಪಾರಿಭಾಷಿಕ ಪದಗಳು :

| | | |
|---|---|---|
| ಪೈರು | - | ಬೆಳೆ |
| ಪೋಡ್ಡಿ | - | ಸೂಳಿ |
| ಗಾವುಂಡ | - | ಗೌಡ |
| ಪ್ರಾಂಜಲ | - | ಮುಕ್ತ |
| ನದಿಮಾತೃಕ | - | ನದಿ ತೀರ ಪ್ರದೇಶ |
| ಉಂಬಳಿ | - | ತೆರಿಗೆ ರಹಿತ ಜಮೀನು |
| ಶುಷ್ಕ ಹವೆ | - | ಒಣ ಹವೆ |
| ಸಾತಿ | - | ಬಟ್ಟೆ |
| ಸಾಲಿಗ | - | ನೇಕಾರ |
| ನಿಷಿಧಿ | - | ಸ್ವಯಂ ಮರಣ (ಸಲ್ಲೇಖನ ವ್ರತ) |
| ಸ್ಥಾಪಿಕ | - | ಶೈವ ಸನ್ಯಾಶಿ |
| ಸ್ಥಾನಪತಿ | - | ಸ್ಥಳದ ಅಧಿಪತಿ |
| ತಲಸ್ಪರ್ಷ | - | ಕೆಳಮಟ್ಟದ |

# ಮಾಹಿತಿ ನೀಡಿದ ವ್ಯಕ್ತಿಗಳು

೧) ಡಾ|| ವ್ಹಿ. ಎಸ್. ಮಾಳಿ

೨) ಡಾ|| ಆರ್. ಬಿ. ಚಿಲುಮಿ

೩) ಪ್ರೊ. ಪಿ. ಬಿ. ಕಲಚಿಮಡ

೪) ಪ್ರೊ. ಎಸ್. ಎಸ್. ದೇವರಡ್ಡಿ

೫) ಪ್ರೊ. ವಿಲಾಸ ಎನ್. ಕಾಂಬಳೆ

೬) ಶ್ರೀಮತಿ ಭಾರತಿ ಬಿಜಾಪೂರೆ

೭) ಶ್ರೀ ಶ್ರೀಶೈಲ ಪಿ. ಸನದಿ

೮) ಪ್ರೊ. ಎಸ್. ಜಿ. ಶ್ರೌತಿ ರಾಮತೀರ್ಥ (೨೯)

೯) ಶ್ರೀ ಬಿ. ವ್ಹಿ. ಕುಲಕರ್ಣಿ ನಿವೃತ್ತ ಕನ್ನಡ ಉಪನ್ಯಾಸಕರು, ಅಥಣಿ (೬೫)

೧೦) ಶ್ರೀ ನಾರಾಯಣ ಆನೆಖಿಂಡಿ ಗ್ರಂಥ ಪಾಲಕರು, ಅಥಣಿ (೬೦)

೧೧) ಪ್ರೊ. ಎಮ್. ಎಸ್. ಉಕ್ಕಲಿ ಕನ್ನಡ ಉಪನ್ಯಾಶಕರು, ಅಥಣಿ (೪೦)

# ಛಾಯಾ ಚಿತ್ರಗಳು



ಚಿತ್ರ ನಂ. ← ೧

ಕಲ್ಯಾಣ ಚಾಲುಕ್ಯರ ಕಾಲದ ಅಮೃತಲಿಂಗೇಶ್ವರ ದೇವಾಲಯ, ಅಥಣಿ



ಚಿತ್ರ ನಂ. ← ೨

ಪುರಾತನೇಶ್ವರ ದೇವಾಲಯ, ಅಥಣಿ



ಚಿತ್ರ ನಂ. ← ೩

ಕಲ್ಮೇಶ್ವರ ದೇವಾಲಯದ ಪಾರ್ಶ್ವ ನೋಟ, ಕೊಕಟನೂರ



ಚಿತ್ರ ನಂ.
← ೪

ಶ್ರೀ ಶಿವಯೋಗಿ ಸುಕ್ಷೇತ್ರ ಗಚ್ಚಿನ ಮಠ, ಅಥಣಿ



ಚಿತ್ರ ನಂ.
← ೫

ಜಾಧವಜಿ ಆನಂದಜಿ ಹಿರಿಯ ಮಾಧ್ಯಮಿಕ ಶಾಲೆ, ಅಥಣಿ. 1918



ಚಿತ್ರ ನಂ.
← ೬

ಶ್ರೀ ರಾಘವೇಂದ್ರ ಸ್ವಾಮಿ ಮಠ, ಅಥಣಿ.



ಚಿತ್ರ ನಂ.
← ೭

ಆದಿಲ್‌ಶಾಹಿ ಆಳ್ವಿಕೆಯ ಕಾಲದ ಶ್ರೀ ಸಿದ್ಧೇಶ್ವರ ದೇವಾಲಯ, ಅಥಣಿ.



ಚಿತ್ರ ನಂ.
← ೮

ಶ್ರೀ ವೀರಭದ್ರ ದೇವಾಲಯ, (ತ್ರಿಕೂಟ) ಬಳ್ಳಿಗೇರಿ.



ಚಿತ್ರ ನಂ.
← ೯

ಶ್ರೀ ಮಲ್ಲಿಕಾರ್ಜುನ ದೇವಾಲುಯ, ಶೇಡಬಾಳ



ಚಿತ್ರ ನಂ.
← ೧೦

ಶ್ರೀ ಬಸವೇಶ್ವರ ದೇವಾಲಯದ ಹಿನ್ನೋಟ, ಶೇಡಬಾಳ



ಚಿತ್ರ ನಂ.
← ೧೧

ಶ್ರೀ ಬಸವಣ್ಣನ ದೇವಾಲಯ, ನಂದಗಾಂವ.



ಚಿತ್ರ ನಂ.
← ೧೨

ಶ್ರೀ ಬಸವೇಶ್ವರ ದೇವಾಲಯದ ಹಿನ್ನೋಟ, ಬಳ್ಳಿಗೇರಿ



ಗರ್ಭಗ್ರಹದ ಬಾಗಿಲುವಾಡ
ಬಸವೇಶ್ವರ ದೇವಾಲಯ, ಬಳ್ಳಿಗೇರಿ

ಶೇಡಬಾಳ ಗ್ರಾಮದ
ಮಾಲಾಸ ಸ್ತಂಭ

ಚಿತ್ರ ನಂ.
← ೧೩,೧೪



ಕಲಾ ಲಿಂಗೇಶ್ವರ ದೇವಾಲಯ
ಹಿನ್ನೋಟ, ಕೊಟ್ಬಲಗಿ.



ಮುಖ ಮಂಟಪ
ಬಸವಣ್ಣ ದೇವಾಲಯ ನಂದಗಾಂವ

ಚಿತ್ರ ನಂ.
← ೧೫,೧೬



ಮಹಾವೀರನ ಶಿಲ್ಪ (ಮಹೇಷವಾಡಗಿಯ ಮಹಾವೀರನ ಬಸದಿಯಲ್ಲಿ)

ಮಹಾವೀರನ ಶಿಲ್ಪ (ಮಹಿಷವಾಡಗಿಯ ಜೈನ ಬಸದಿಯಲ್ಲಿ)

ಚಿತ್ರ ನಂ.
← ೧೭



ಅಥಣಿಯಲ್ಲಿಯ ಪವಾರ ದೇಸಾಯಿಗಳ ವಾಡೆಯ ಹೊರನೋಟ.



Pre historic painting - of a spoon bill on a pottery from Satti

ಕೃಪೆ: ಬೆಲ್ಗವ್ ಡಿಸ್ಟ್ರಿಕ್ಟ್ ಗೆಜೆಟಿಯರ್
(J. M Campbell. Edited. 1884)



ಅಥಣಿಯ ಅಮೃತಲಿಂಗೇಶ್ವರ ದೇವಾಲಯದ ತಲನಕ್ಷೆ

## ದೇವಾಲಯಗಳ ತಲನಕ್ಷೆಗಳು



ರಾಮತೀರ್ಥದ ಉಮಾರಾಮೇಶ್ವರ ದೇವಾಲಯದ ತಲನಕ್ಷೆ

